# ಸಾಂಗಾತಿ

ತಿಂಗಳ ಪತ್ರಿಕೆ

ಜುಲೈ : 1999

- ಹಲವು ಜನರು, ಹಲವು ಲೈಂಗಿಕತೆ - ಒಂದು ವೈಯಕ್ತಿಕ ಪಯಣ
- ನರ್ಮದಾದಂಥ ಯೋಜನೆಗಳಿಂದ ನಿಜ ಅಭಿವೃದ್ಧಿ ಸಾಧ್ಯವೇ
- ಹೆಂಡತಿಯರು ಮಾರಾಟಕ್ಕಿದ್ದಾರೆ........?
- ಪೊಲೀಸರ ದಬ್ಬಾಳಿಕೆ ವಿರೋಧಿಸಿ ಪ್ರತಿಭಟನೆ
- ಅಪಾಯಕಾರಿ ಗರ್ಭನಿರೋಧಕಗಳು
- ಓ ಶಾಂತಿಯೇ ನೀ ಎಲ್ಲೆಡೆ ಗಸ್ತು ತಿರುಗು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 14 ಸಂಚಿಕೆ : 6
ಜುಲೈ : 1999





ವಿಳಾಸ
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ 3-00 ರೂ.
ವಾರ್ಷಿಕ ಚಂದಾ 40-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ......**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಎರಡೂ ಕಡೆ ಎದ್ದಿದ್ದ ಯುದ್ಧದ ಕಾರ್ಮೋಡ ಕರಗಿದೆ. ಎರಡೂ ದೇಶಗಳು ವಿಜಯ ಪಡೆದೆವೆಂದು ಬೀಗುತ್ತಿವೆ. ಪಾಕಿಸ್ತಾನ ಕಾಶ್ಮೀರದ ಸಮಸ್ಯೆಯನ್ನು ಅಂತರಾಷ್ಟ್ರದ ಗಮನಕ್ಕೆ ತಂದು, ತನ್ನ ಉದ್ದೇಶ ಈಡೇರಿಸಿಕೊಂಡಿದ್ದಕ್ಕಾಗಿ ಬೀಗುತ್ತಿದ್ದರೆ, ಭಾರತ ಅತಿಕ್ರಮಣಕಾರಿಗಳನ್ನು ಹಿಮ್ಮೆಟ್ಟಿಸಿದೆ ಎಂದು ವಿಜಯೋತ್ಸವ ನಡೆಸುತ್ತಿದೆ. ಇದನ್ನು ತಪ್ಪಿಸುವ ಸಾಧ್ಯತೆಗಳನ್ನು ಬಳಸಲಿಚ್ಛಿಸದ ಅಧಿಕಾರಿ ವರ್ಗದ ವೈಖರಿಯಿಂದ ನೋವನ್ನು ಅನುಭವಿಸಿದವರು, ಅನುಭವಿಸುತ್ತಿರುವವರು ಎರಡೂ ಕಡೆಯ ಸೈನ್ಯದಲ್ಲಿ ಹುತಾತ್ಮರಾದ ಸೈನಿಕರ ಹತ್ತಿರದ ಸಂಬಂಧಿಗಳು. ಸೈನ್ಯಕ್ಕೆ ಭರ್ತಿಯಾದಾಗಲೇ ಜೀವದ ಹಂಗನ್ನು ತೊರೆದಿದ್ದರಾದರೂ ಆಳುವ ವರ್ಗದ ತಪ್ಪಿನಿಂದಾಗಿ, ಕಾಶ್ಮೀರಕ್ಕೆ ರಾಜಕೀಯ ಪರಿಹಾರ ಕೊಡಲಾಗದ ಬೇಜವಾಬ್ದಾರಿಯಿಂದಾಗಿ ಇವರನ್ನು ಬಲಿಪಶುಗಳನ್ನಾಗಿ ಮಾಡಿದ್ದುದೇ ಖೇದದ ವಿಚಾರ.

ಇದರ ಜೊತೆ ಜೊತೆಗೆ ಎಲ್ಲೆಲ್ಲೂ ಅಬ್ಬರದ ಘೋಷಣೆ, ಮೆರವಣಿಗೆ ದೇಶಾಭಿಮಾನದ ಮಹಾಪೂರ. ಕುಳಿತಲ್ಲಿಂದಲೇ ನಾವು ನಿಮ್ಮೊಂದಿಗಿದ್ದೇವೆ ಎಂದ ಜನಸಮೂಹ. ಯಾವುದು ಸರಿ, ಯಾವುದು ತಪ್ಪು. ಹೀಗೇಕಾಯಿತು ಎಂಬ ಪ್ರಶ್ನೆಗಳನ್ನೆತ್ತಿದರೆ ಸಾಕು, ದೇಶದ್ರೋಹಿಯ ಪಟ್ಟ. ಇವೆಲ್ಲದರ ಮಧ್ಯೆ ಕಾರ್ಗಿಲ್ ನಿಧಿಗೆ ಹಣ ಸಂಗ್ರಹಿಸಿದುದರ ಕೆಲವು ಸ್ಯಾಂಪಲ್‌ಗಳು ಮರುಚಿಂತನೆಗೆ ಎಡೆಮಾಡಿ ಕೊಡುತ್ತವೆ ಎಂಬುದರಲ್ಲಿ ಎರಡು ಮಾತಿಲ್ಲ. ಸರ್ಕಾರಿ, ಸರ್ಕಾರೇತರ ಸಾರ್ವಜನಿಕ ಹೀಗೆ ಎಲ್ಲಾ ಮೂಲೆಗಳಿಂದ ಹರಿದು ಬಂದ ಹಣದಲ್ಲಿ ಬಡ ಬೋರೇಗೌಡನ ಕಿಲುಬು ಕಾಸಿನಿಂದ ಹಿಡಿದು ಸಿರಿವಂತರ ಕಪ್ಪು ಹಣದವರೆಗೆ ಎಲ್ಲವೂ ಅಡಗಿತ್ತು. ಶಾಲೆಗಳಲ್ಲಿ ಮಕ್ಕಳನ್ನು ಮೆರವಣಿಗೆಗಳಲ್ಲಿ ಕರೆದುಕೊಂಡು ಹೋಗಿ ಹಣ ಸಂಗ್ರಹಿಸುವ ಕಾರ್ಯ ಟೀಚರ್‌ಗಳದ್ದು. ವಾಪಸ್ ಬಂದು ನಾವೆಷ್ಟು ಸಂಗ್ರಹಿಸಿದೆವು, ನೀವೆಷ್ಟು, ನಮ್ಮ ಶಾಲೆ ಎಷ್ಟು, ನಿಮ್ಮ ಶಾಲೆ ಎಷ್ಟು ಎನ್ನುವ ಪೈಪೋಟಿ. ಸದ್ಯ, ಇದಕ್ಕೇನೂ ಬಹುಮಾನವಿರಲಿಲ್ಲ, ಇಲ್ಲದಿದ್ದರೆ ಇನ್ನೇನು ಅನಾಹುತವಾಗುತ್ತಿತ್ತೊ? ಸಂಘ ಪರಿವಾರದ ಜನ ಶಾಲೆ ಶಾಲೆಗೆ ಯುದ್ಧದ ಹೆಸರಿನಲ್ಲಿ ಭಾಷಣ ಮಾಡಲು ಹೋಗಿ ಮುಸ್ಲಿಂ ಜನಾಂಗದ ವಿರುದ್ಧ ವಿಷಬೀಜವನ್ನು ಎಳೆ ಮನಸ್ಸುಗಳಲ್ಲಿ ಬಿತ್ತಿದ್ದು ಕೂಡ ದೇಶಾಭಿಮಾನದ ಹೆಸರಿನಲ್ಲೇ.

ವ್ಯಾಪಾರಿ ವರ್ಗ ತನ್ನ ದೇಶಪ್ರೇಮವನ್ನು ತೋರಿಸಲು ಕಂಡುಕೊಂಡ ಮಾರ್ಗ, ಜನರ ಮನಸ್ಸಿನಲ್ಲಾದ ದೇಶಪ್ರೇಮದ ಸಮ್ಮೋಹನವನ್ನು ಜಾಹಿರಾತಿಗಿಳಿಸಿದ ಬಗೆ; ನೀವು ಕಾರ್ಗಿಲ್‌ಗೆ ಹೋಗಲು ಸಾಧ್ಯವಿಲ್ಲ. ಆದರೆ ಇಲ್ಲಿ ಬಂದು ಕೊಂಡ ಪ್ರತಿ ವಸ್ತುವಿನ ಶೇ. ೧೦ರಷ್ಟು ಕಾರ್ಗಿಲ್ ಸೇರುತ್ತದೆ. ತ್ವರೆ ಮಾಡಿ..... ಆ ಮೂಲಕ ದೇಶಪ್ರೇಮಿಯಾದ ಮಾಲಿಕ ಕಮರ್ಷಿಯಲ್ ತೆರಿಗೆಯಿಂದ ತಪ್ಪಿಸಿಕೊಂಡ. ಮಾರಿದ ಬಹುರಾಷ್ಟ್ರೀಯ ಕಂಪನಿಯ ಸರಕು ಚಕಚಕನೆ ಕರಗಿ ಲಾಭದ ಮೂಟೆ ವಿದೇಶಿಗಳ ಕೈ ಸೇರಿದ್ದು ದೇಶಪ್ರೇಮದ ಒಂದು ಸ್ಯಾಂಪಲ್.

ಕ್ಯಾಸೆಟ್‌ನ ಸರದಾರರು ನಾವೇನು ಕಮ್ಮಿ ಎಂಬಂತೆ ಕಾರ್ಗಿಲ್‌ನ ಬಗ್ಗೆ ಒಂದು ನಾಟಕದ ಧ್ವನಿಸುರುಳಿ ಹೊರತಂದು, ನಮ್ಮ ನಿಮ್ಮನ್ನೆಲ್ಲ ಶಂಕಿಸಿದ ಪೋಸ್ಟರ್ ಕೀಳುತ್ತದ್ದುದು, "ನೀವು ಭಾರತೀಯರೆ? ದೇಶಾಭಿಮಾನಿಗಳೇ? ದೇಶ ಪ್ರೇಮಿಗಳೇ? ಹಾಗಾದರೆ ಈ ಕ್ಯಾಸೆಟ್ ಕೊಳ್ಳಿ."

ಪ್ರಧಾನಿಯವರ ಪರಿಹಾರ ನಿಧಿಯಲ್ಲಿ 200 ಕೋಟಿ ಸಂಗ್ರಹವಾಗಿದ್ದಾಗ, ಸೈನಿಕರ ಪರಿಹಾರಕ್ಕೆ ಬಳಸಿದ್ದು 1.5 ಕೋಟಿ ಏಕೆ ಎಂದು ಪ್ರಶ್ನಿಸಿದ್ದಕ್ಕೆ ಹಾರಿಕೆಯ ಉತ್ತರ. ಎಷ್ಟೋ ಜನ ತಮ್ಮ ಪ್ರಶ್ನೆ ಮಾಡುವ ಹಕ್ಕನ್ನೇ ಕಳೆದುಕೊಂಡುಬಿಟ್ಟಿದ್ದರು. ದೇಶದ್ರೋಹಿ ಎಂಬ ಪಟ್ಟಕ್ಕೆ ಹೆದರಿ.

ಆಕಾಶವಾಣಿಯಲ್ಲಿ ಕಂತುಗಳಂತೆ ಪ್ರಸಾರವಾದ "ಕಾರ್ಗಿಲ್‌ನ ಕರೆ" ಕಾರ್ಯಕ್ರಮ, ಕರುಳು ಕಿತ್ತು ಬರುವಂತಿದ್ದರೂ, ಕಣ್ಣೀರಿನ ಕೋಡಿ ಹರಿಸಿದರೂ, ಊರು, ಜನ ನಮಗೆ ಅವನಿಂದ ಕೀರ್ತಿ ಬಂತೆಂದು ಅಬ್ಬರಿಸಿದರೂ, ಒಂದೆರಡು ಉದಾಹರಣೆಗಳನ್ನು

ಹೊರತುಪಡಿಸಿದರೆ ಮಿಕ್ಕಂತೆ ಬಡತನದ ಬವಣೆ, ಕುಟುಂಬದ ಜವಾಬ್ದಾರಿ, ಮನೆಯ ಹಿರಿಯನಾದ ಕಾರಣ ಅವನನ್ನು ಈ ಮರಣದ ಗಡಿಗೆ ತಲುಪಿಸಿದ್ದವೆಂಬ ಕಠೋರ ಸತ್ಯವನ್ನು ಮರೆಮಾಚಲು ಸಾಧ್ಯವಾಗಲೇ ಇಲ್ಲ.

ಗಡಿಗಳಲ್ಲಿ ಯುದ್ಧ ನಡೆಯುತ್ತಿರುವಾಗ ಸೈನಿಕರ ಬಗ್ಗೆ ಸಹಾನುಭೂತಿ, ಮಡಿದವರ ಕುಟುಂಬಗಳಿಗೆ ಆಶ್ವಾಸನೆ, ಆಮೇಲೆ ಯಥಾಪ್ರಕಾರ ಮರೆವು. ಭ್ರಷ್ಟತನಕ್ಕೆ ಹಿಡಿದ ಕನ್ನಡಿ ಎಂಬಂತೆ 1971ರಲ್ಲಿ ನಡೆದ ಯುದ್ಧದಲ್ಲಿ ಹುತಾತ್ಮರಾದ ಕುಟುಂಬದವರು ಕಾರ್ಗಿಲ್ ಯುದ್ಧ ನಡೆಯುತ್ತಿರುವಾಗಲೇ ದೆಹಲಿಯಲ್ಲಿ ಮೆರವಣಿಗೆ ತೆಗೆದು, ಅಂದಿನ ಸರ್ಕಾರಗಳು ಕೊಟ್ಟ ಆಶ್ವಾಸನೆಗಳು ಇಂದಿಗೂ ಕೂಡ ಈಡೇರಿಲ್ಲವೆಂಬುದನ್ನು ಸಾರ್ವಜನಿಕರಿಗೇ ಮನವರಿಕೆ ಮಾಡಿಕೊಟ್ಟಿದ್ದಾರೆ. ಇದರೊಂದಿಗೆ ಪರಿಹಾರ ಸಿಕ್ಕಿದ ಒಂದು ಉದಾಹರಣೆ ನೋಡಿ; 51 ವರ್ಷದ ಪಂಜಾಬಿನ ಮುನಿದೇವಿ 1971ರ ಯುದ್ಧದಲ್ಲಿ ತನ್ನ ಗಂಡನನ್ನು ಕಳೆದುಕೊಂಡ ನತದೃಷ್ಟೆ. ಪೆನ್‌ಶನ್‌ಗಾಗಿ ಅರ್ಜಿಗಳ ಮೇಲೆ ಅರ್ಜಿ ಗುಜರಾಯಿಸಿದ್ದಕ್ಕಾಗಿ ಆಕೆಗೆ ಸಿಗುತ್ತಿರುವ ಮಾಸಿಕ ಪೆನ್‌ಶೆನ್ ಕೇವಲ 15 ರೂ.

ದೇಶಪ್ರೇಮಿಗಳಾದ ಶಿವ ಸೈನಿಕರು ಮೆರವಣಿಗೆ ತೆಗೆದು ಹೊರಟಿದ್ದು ಕಾರ್ಗಿಲ್‌ಗಲ್ಲ, ದಿಲೀಪ್‌ಕುಮಾರ್ ಮನೆಗೆ. ಸ್ನೇಹದ ಸಂಕೇತವನ್ನು ಹಿಂದಿರುಗಿಸಿ ಎಂದು ಆಗ್ರಹ ಪಡಿಸಲು. ಸಂಘ ಪರಿವಾರದ ಮುಖವಾಣಿ "ಪಾಂಚಜನ್ಯ" ಜನರ ಜೀವಕ್ಕೆ ಏನೂ ಬೆಲೆಯಿಲ್ಲ ಎಂದು ಸಾರಿದ ವೈಖರಿ ಹಾಗೂ ನ್ಯೂಕ್ಲಿಯರ್ ಯುದ್ಧಕ್ಕೆ ಪ್ರೋತ್ಸಾಹಿಸಿದ ಪರಿ - "ನಾವೇನಾದರೂ ಅವರ ಮೂರು ನಗರಗಳ ಮೇಲೆ ಬಾಂಬ್ ಹಾಕಿದರೆ ಅವರು ಸರ್ವನಾಶ ಆಗ್ತಾರೆ, ಹಾಗೇನೇ ಅವರು ನಮ್ಮ ಮೂರು ಮಹಾನಗರಕ್ಕೆ ಹಾಕಿದರೆ ಏನು ಮಹಾ, ಇನ್ನೂ ಎಷ್ಟೋ ಜನ ಬದುಕಿ ಇರ್ತಿವಲ್ಲ, ಸ್ವಲ್ಪ ಜನಸಂಖ್ಯೆಯ ಸಮಸ್ಯೆ ಪರಿಹಾರವಾಗುತ್ತದೆ ಎಂಬುವ ನೀತಿ, ಜನರು ಲೆಕ್ಕಕ್ಕೆ ಇಲ್ಲದೇ ಇರುವುದು ಆಳುವ ವರ್ಗದ ದೃಷ್ಟಿಕೋನವನ್ನು ಉತ್ತರಿಸುತ್ತದೆ.

ದೇಶದ್ರೋಹಿಗಳೇ ಆಡಳಿತ ಸೂತ್ರದಲ್ಲಿದ್ದರೂ, ಇಡೀ ದೇಶವನ್ನೇ ವಿದೇಶಕ್ಕೆ ಒತ್ತೆಯಿಟ್ಟ ಜನರ ನಾಯಕತ್ವದ ನೆರಳಿನಲ್ಲಿ ಕೋಟಿಗಟ್ಟಲೇ ಜನ ಬದುಕಬೇಕಾದ ವಿಪರ್ಯಾಸದಲ್ಲಿ, ಅಲ್ಪ ಸಂಖ್ಯಾತ ಭಾರತೀಯ ಮುಸಲ್ಮಾನ ಜನಾಂಗದ ಮಹಿಳೆ, ಮಕ್ಕಳೆನ್ನದೆ ಬೀದಿಗೆ ಬಂದು ಪಾಕಿಸ್ತಾನದ ವಿರುದ್ಧ ಕೂಗಿ, ದೇಶಪ್ರೇಮವನ್ನು ತೋರಿಸಬೇಕಾಗಿ ಬಂದ ಅನಿವಾರ್ಯ ಎಂಥವರನ್ನೂ ದಂಗು ಬಡಿಸುತ್ತದೆ.

ಯುದ್ಧ ಯಾವುದೇ ಪರಿಹಾರ ಒದಗಿಸದು ಎಂಬ ಸತ್ಯ ಇತಿಹಾಸ ನಮಗೆ ಮನವರಿಕೆ ಮಾಡಿಕೊಟ್ಟಿದೆ. ಯುದ್ಧದಿಂದ ಎಲ್ಲವನ್ನು ಅತಿಯಾಗಿ ಕಳೆದುಕೊಂಡವರು ಮಹಿಳೆಯರೇ ಎಂಬುದು ಗಮನಾರ್ಹ. ಯುದ್ಧ ಅಥವಾ ಯುದ್ಧೋನ್ಮಾದದ ಬದಲೀ ಪರಿಹಾರ ಮಾರ್ಗಗಳೇ ಇಂದು ಇಡೀ ವಿಶ್ವ ಬಳಸಬೇಕಾಗಿರುವ ದಾರಿ. ಅದರ ನಿಟ್ಟಿನ ಪ್ರಯತ್ನ ನಮ್ಮ ನಿಮ್ಮೆಲ್ಲರಿಂದಲೇ ಆಗಲಿ.

•

## ಕಟ್ಟಡ ಕಾರ್ಮಿಕ ರಾಷ್ಟ್ರೀಯ ಸಮಾವೇಶ

ಕಟ್ಟಡ ಕಾರ್ಮಿಕರ ಹಿತರಕ್ಷಣೆ ಮಾಡುವ ಕಾನೂನು ನಮ್ಮ ದೇಶದಲ್ಲಿ ಬಳಕೆಯಲ್ಲಿದ್ದರೂ, ಅದು ಸಂಪೂರ್ಣವಾಗಿ ವಿಫಲವಾಗಿದೆ. ಹಾಗೂ ಪ್ರಸ್ತುತ ಕಾನೂನಿನಲ್ಲಿ ಬದಲಾವಣೆಯನ್ನು ತರಲು ಒತ್ತಾಯ ಮಾಡಲಾಗುತ್ತಿದೆ. ಇತ್ತೀಚೆಗೆ ನಡೆದ ರಾಷ್ಟ್ರೀಯ ಕಟ್ಟಡ ಕಾರ್ಮಿಕರ ಸಮಾವೇಶದಲ್ಲಿ ಈ ಪ್ರಯತ್ನವನ್ನು ನಡೆಸಲಾಯಿತು. ಕಟ್ಟಡ ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡಲು ಒಂದು ಬೋರ್ಡ್ ರಚಿಸಬೇಕೆಂದು ಇಲ್ಲಿ ಸೂಚಿಸಲಾಯಿತು. ಈ ಬೋರ್ಡ್ ಮೂಲಕ ಕಟ್ಟಡ ಕಾರ್ಮಿಕರನ್ನು ನೋಂದಾಯಿಸುವುದು, ಅವರಿಗೆ ದೊರಕಬೇಕಾದ ಸೌಲಭ್ಯಗಳನ್ನು ಈ ಬೋರ್ಡ್ ಮೂಲಕ ದೊರಕಿಸಿಕೊಡುವುದೆಂದು ಸಲಹೆ ನೀಡಲಾಯಿತು. ಈ ಮಂಡಳಿಯಲ್ಲಿ ಮಹಿಳೆಯರಿಗೆ ಆದ್ಯತೆ ನೀಡಬೇಕೆಂದು ಹಾಗೂ ಅಗತ್ಯವಾದ ತರಬೇತಿಯನ್ನು ಕಾರ್ಮಿಕರಿಗೆ ನೀಡುವ ಯೋಜನೆಯನ್ನು ಈ ಮಂಡಳಿಯ ಮೂಲಕ ಜಾರಿಗೆ ತರಬಹುದೆಂದು ಭಾವಿಸಲಾಯಿತು. ಈ ಮಂಡಳಿಯನ್ನು ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ ರಚಿಸಬೇಕೆಂದು ಸಹ ಸೂಚಿಸಲಾಯಿತು.

ಪ್ರಸ್ತುತದಲ್ಲಿರುವ ಕಾನೂನನ್ನು ಬದಲಾವಣೆ ಮಾಡಬೇಕಲ್ಲದೆ, ಕಾರ್ಮಿಕರಿಗೆ ಸುರಕ್ಷೆ, ಪರಿಹಾರವನ್ನು ನೀಡುವುದು, ರಾಜ್ಯ ಮಟ್ಟದಲ್ಲಿ ಕಾರ್ಮಿಕ ಕಲ್ಯಾಣ ಇಲಾಖೆಯನ್ನು ಸ್ಥಾಪಿಸುವುದು, ಮುಂತಾದ ಪ್ರಮುಖ ಬೇಡಿಕೆಯನ್ನು ಈ ಸಮಾವೇಶದಲ್ಲಿ ಚರ್ಚಿಸಿ, ಸರ್ಕಾರದ ಮುಂದಿಡಲಾಯಿತು.

# ಹಲವು ಜನರು, ಹಲವು ಲೈಂಗಿಕತೆ - ಒಂದು ವೈಯಕ್ತಿಕ ಪಯಣ

ನಾನು ಹುಟ್ಟಿದ್ದು ೧೯೭೨ರಲ್ಲಿ, ಆಂಧ್ರದ ಚಿತ್ತೂರಿನ ಬಳಿಯ ಹಳ್ಳಿಯ ಮಧ್ಯಮ ವರ್ಗದ ರೈತ ಕುಟುಂಬದಲ್ಲಿ. ೭ನೇ ತರಗತಿಯವರೆಗೆ ನನ್ನೂರಿನ ಸುತ್ತಮುತ್ತ ನನ್ನ ವ್ಯಾಸಂಗ. ಹೈಸ್ಕೂಲಿಗಾಗಿ ಊರಿನಿಂದ ಸುಮಾರು 100 ಕಿ.ಮೀ. ದೂರವಿದ್ದ ಬಾಲಕರ ವಸತಿಶಾಲೆಗೆ ದಾಖಲಾದೆ, ನಾನು ನನ್ನದೇ ಲಿಂಗದವರೆಡೆಗೆ ಆಕರ್ಷಿತನಾಗಿರುವ ಬಗ್ಗೆ ನನಗೆ ಸಂಪೂರ್ಣ ಅರಿವು S.S.L.C. ಮುಗಿಸುವ ವೇಳೆಗಾಗಲೇ ಆಗಿತ್ತು. ವಸತಿ ಶಾಲೆಯ ಮೂರು ವರ್ಷಗಳ ಸಮಯದಲ್ಲಿ ನಾನು ಹಲವು ಬಾರಿ ಲೈಂಗಿಕ ದಾಳಿಗೆ ಒಳಗಾಗಿದ್ದೆ. ಹೆಚ್ಚಾಗಿ ಅವರು ನನ್ನ ಸಹಪಾಠಿಗಳೇ ಇರುತ್ತಿದ್ದರು. ಅವೆಲ್ಲ ರಾತ್ರಿಯ ಕತ್ತಲೆಯಲ್ಲಿ ಯಾವುದೇ ಮಾತು ಹಾಗೂ ಚರ್ಚೆಗಳಿಲ್ಲದೆ ನಡೆದಂಥವು. ಮಾರನೇ ಬೆಳಿಗ್ಗೆ ಏನೂ ನಡೆದೇ ಇಲ್ಲವೇನೋ ಎಂಬಂತೆ ವರ್ತಿಸುತ್ತಿದ್ದೆವು.

ನನ್ನ ೧೫ನೇ ವಯಸ್ಸಿನಲ್ಲಿ ಎಲೆಕ್ಟ್ರಾನಿಕ್ಸ್‌ನಲ್ಲಿ ವಿಶೇಷ ಡಿಪ್ಲಮೋ ಪಡೆಯಲು ೧೯೮೭ಕ್ಕೆ ಹೈದರಾಬಾದ್‌ಗೆ ಬಂದೆ. ೧೯೮೮ರ ಒಂದು ದಿನ ಚಿತ್ರಮಂದಿರದಲ್ಲಿ ಸಿನಿಮಾ ನೋಡುತ್ತಿರುವಾಗ ಮಧ್ಯ ವಯಸ್ಕರೊಬ್ಬರು ನನ್ನ ಮುಂದೆ ಹಾದು ಹೋದರು. ನಾನು ದಿಗಿಲುಗೊಂಡೆ, ಉನ್ಮಾದಗೊಂಡೆ. ಹೇಗೆ ಪ್ರತಿಕ್ರಿಯಿಸುವುದೆಂದು ತಿಳಿಯದೆ ಗಲಿಬಿಲಿಗೊಂಡೆ. ಚಿತ್ರ ಮುಗಿದಾದ ಮೇಲೆ ಅವರೊಂದಿಗೆ ಮಾತನಾಡಲು ಕನಿಷ್ಠ ೩೦ ನಿಮಿಷ ತೆಗೆದುಕೊಂಡೆ. ಈ ಘಟನೆ ನನಗೆ ಹೊಸ ಜಗತ್ತಿಗೆ ತೆರೆಯಿಸಿದಂತಾಯಿತು. ಅದು ಪ್ರೇಮಿಗಳು ಕತ್ತಲೆಯ ಮುಸುಕಿನಲ್ಲಿ ಸಂಧಿಸುವ ಜಗತ್ತು. ಇದು ನನಗೆ ಕ್ರೂಸಿಂಗ್ ಅನ್ನು ಪರಿಚಯಿಸಿತು. (ಒಬ್ಬ ಗಂಡು ಇನ್ನೊಬ್ಬ ಗಂಡನ್ನು ಲೈಂಗಿಕತೆಗಾಗಿ ಸಂಧಿಸುವ ಸ್ಥಳ) ಇದು ಸಾರ್ವಜನಿಕ ಉದ್ಯಾನವನದ ಕತ್ತಲೆಯ ಮೂಲೆಯಿರಬಹುದು ಅಥವಾ ಆಟದ ಮೈದಾನವಿರಬಹುದು ಅಥವಾ ಬಸ್ ಅಥವಾ ರೈಲ್ವೆ ನಿಲ್ದಾಣದ ಸಾರ್ವಜನಿಕ ಶೌಚಾಲಯವಿರಬಹುದು. ನೀವು ಯಾರನ್ನೋ ಸಂಧಿಸುತ್ತೀರಿ, ಮಾತನಾಡುತ್ತೀರಿ, ಸೆಕ್ಸ್ ಅನುಭವಿಸಲು ಎಲ್ಲಿಗಾದರು ಹೋಗಲು ನಿರ್ಧರಿಸುತ್ತೀರಿ. (ಹೀಗಾಗುವುದೂ ಸ್ವಲ್ಪ ವಿರಳವೇ) ವಿಳಾಸ ಹಾಗೂ ಉದ್ಯೋಗದ ಮಾಹಿತಿ ಇರಲಿ ಎಷ್ಟೋ ಸಾರಿ ಹಲವು ಬಾರಿ ಭೇಟಿಯಾದ ಆ ಮನುಷ್ಯನ ಹೆಸರು ಕೂಡ ತಿಳಿದಿರುವುದಿಲ್ಲ.

ನಾನು 18ನೇ ವಯಸ್ಸಿನವನಾದಾಗ ಇಂಥಹ ಸ್ಥಳಗಳಿಗೆ ಸ್ನೇಹಿತರನ್ನೋ/ಪ್ರಿಯಕರನನ್ನೋ ಅರಸಿ ನಿರಂತರವಾಗಿ (ವಾರದಲ್ಲಿ ಎರಡು ಸಂಜೆ) ಹೋಗಲು ಪ್ರಾರಂಭಿಸಿದ್ದೆ. ಹೀಗೆ ನಾವು ಪೂರ್ವಾಪರ ತಿಳಿಯದ ಕನಿಷ್ಟ 200 ಮಂದಿಯನ್ನಾದರೂ ಸಂಧಿಸಿದ್ದೇನೆ. ಅದರಲ್ಲಿ ಯಾರೊಬ್ಬರ ಕೆಲಸ/ಮನೆ/ಆಫೀಸ್ ವಿಳಾಸ/ಫೋನ್ ನಂಬರ್ ಏನೂ ಗೊತ್ತಿಲ್ಲ. ಎಷ್ಟೋ ಸಾರಿ ಇಂಥಹ ಜಾಗ ಹಾಗೂ ದಿನ ಸಿಗುತ್ತೇವೆಂದು ಅವರು ಹೇಳಿದ್ದರೂ ಅವರನ್ನು ತಿರುಗಿ ನೋಡಿದ್ದೇ ಇಲ್ಲ. ಮಾತನಾಡಲು, ಚರ್ಚಿಸಲು ನನ್ನ ಭಾವನೆಗಳನ್ನು ಹಂಚಿಕೊಳ್ಳಲು ಯಾರೊಬ್ಬರೂ ಇರಲಿಲ್ಲ, ನಾನು ಏಕಾಂಗಿಯಾಗಿದ್ದೆ. ನನ್ನಂಥದ್ದೇ ಜನರನ್ನ (ಗೇ/ಸಲಿಂಗಿಗಳನ್ನು) ಭೇಟಿಯಾಗಲು ಹಾಗೂ ನನ್ನ ಲೈಂಗಿಕತೆಯನ್ನು ಅರ್ಥಮಾಡಿಕೊಳ್ಳಲು ಕ್ರೂಸಿಂಗ್ ಜಾಗಗಳಿಗೆ ಭೇಟಿ ನೀಡುತ್ತಿದ್ದೆ. ಸಾಮಾಜಿಕ ಕಾರ್ಯಕರ್ತರನ್ನೊಳಗೊಂಡಂತೆ ಯಾರೊಬ್ಬರಿಗೂ ಇಂಥ ವಿಷದ ಮಾತುಕತೆಯಲ್ಲಿ ಆಸಕ್ತಿಯಿರಲಿಲ್ಲ. (ಆ ವೇಳೆಗಾಗಲೆ ನಾನು S.F.I.ನ ಸಕ್ರಿಯ ಕಾರ್ಯಕರ್ತನಾಗಿದ್ದೆ). ಇಂಥಹ ಅನುಭವ ನನ್ನನ್ನು ಮತ್ತಷ್ಟು ಏಕಾಂಗಿಯಾಗಿಸಿತು. ಈ ಸ್ಥಳಗಳಿಗೆ ಆಗಾಗ್ಗೆ ಭೇಟಿ ಕೊಡುತ್ತಿರುವವರು ಸುಲಭವಾಗಿ ಇತರರಿಗೆ ತಿಳಿಸುತ್ತೇವೆಂಬ ಬ್ಲಾಕ್‌ಮೇಲ್‌ಗೆ ಬಲಿಯಾಗುತ್ತಾರೆ. ಅಕ್ಷರಶಃ ಇವರು ಸಮಾಜದ ಅಂಚಿನಲ್ಲೇ ಬದುಕುತ್ತಾರೆ. ನನ್ನ ಗಲಿಬಿಲಿ ಹಾಗೂ ಅನುಮಾನಗಳನ್ನು ಹಂಚಿಕೊಳ್ಳಬಹುದಾದ ಯಾರೊಬ್ಬರನ್ನಾದರೂ ಭೇಟಿಯಾಗುವೆನೆಂಬ ಆಸೆ ಕಳೆದುಕೊಂಡು.

ಕ್ರೂಸಿಂಗ್‌ಗಳು ಅಷ್ಟೇನು ಸುರಕ್ಷಿತವಲ್ಲ. ಆಗಾಗ ಕೆಲವರು ಪೊಲೀಸರ ಕೈಗೆ ಸಿಕ್ಕು ತಮ್ಮಲ್ಲಿರುವ ಹಣ ಹಾಗೂ ಬೆಲೆ ಬಾಳುವ (ವಾಚು....) ವಸ್ತುಗಳನ್ನು ಕಳೆದುಕೊಳ್ಳುತ್ತಾರೆ. ಅವನನ್ನು ಪೊಲೀಸ್ ಸ್ಟೇಷನ್‌ಗೆ ಕರೆದುಕೊಂಡು ಹೋಗುವುದಾಗಿ, ಹಾಗೂ ಪೋಷಕರ ಸಂಬಂಧಿಕರಿಗೆ ತಿಳಿಸುತ್ತೇವೆಂದು ಹೆದರಿಸುತ್ತಾರೆ. ಕೆಲವು ಸಾರಿ ದೈಹಿಕವಾಗಿ ಅಥವಾ ಮಾನಸಿಕವಾಗಿ ದೂಷಣೆಗೊಳಗಾಗುವ ಗಂಡಾಂತರ ಕೂಡ ಇದೆ. ಇಂಥ ಸನ್ನಿವೇಶದ ಲಾಭ ಪಡೆದ ಗೂಂಡಾಗಳೋ/ಹಸ್ಲರೋ ತಾವು ಗೇ/ಸಲಿಂಗಿಗಳೆಂದು ನಟಿಸುತ್ತಾರೆ. ನೀವು ಗೇ ಎಂದೇನಾದರೂ ಒಪ್ಪಿಕೊಂಡಿರೋ ಸರಿ, ನಿಮ್ಮನ್ನು ಕೆಟ್ಟಮಾತುಗಳಿಂದ ಬೈಯ್ಯುವುದು, ಹೊಡೆಯುವುದಷ್ಟೇ ಅಲ್ಲದೆ, ಪೊಲೀಸರಿಗೆ ಒಪ್ಪಿಸುವೆವೆಂಬ ಭಯ ತೋರಿಸಿ

ನಿಮ್ಮಲ್ಲಿರುವ ಹಣ, ಬೆಲೆ ಬಾಳುವ ಎಲ್ಲವನ್ನೂ ತಮ್ಮದಾಗಿಸಿಕೊಳ್ಳುತ್ತಾರೆ. ಹೀಗಾದಾಗ ಈ ಅಹಿಂಸೆಯ ನಿಷ್ಪಕ್ಷಪಾತವಾದ ಈ ಪ್ರಪಂಚವನ್ನು ಆತ್ಮಹತ್ಯೆ ಮಾಡಿಕೊಂಡು ತೊರೆಯಲು ಯೋಚಿಸುತ್ತೀರಿ. ಸಲಿಂಗಿಯಾಗಿದ್ದಕ್ಕಾಗಿ ನಿಮ್ಮನ್ನು ನೀವೇ ದ್ವೇಷಿಸುತ್ತೀರಿ ಮತ್ತು ದೂಷಣೆಗೆ ದ್ಯೋತವಾಗುತ್ತೀರಿ ಹಾಗೂ ಈ ಕ್ರೂಸಿಂಗ್ ಜಾಗಗಳಿಗೆ ಇನ್ನೊಮ್ಮೆ ಹೋಗುವ ಸಾಹಸ ಮಾಡುವುದಿಲ್ಲವೆಂದು ನಿರ್ಧರಿಸುತ್ತೀರಿ. ಆದರೆ ನಿಮಗೇ ಬೇರೆ ದಾರಿಯೇ ಇಲ್ಲ. ನೀವು ಮತ್ತೆ ಮತ್ತೆ ಹೋಗುತ್ತೀರಿ, ಮತ್ತೆ ಮತ್ತೆ ದೂಷಣೆಗೊಳಗಾಗುತ್ತೀರಿ. ನೀವು ಸತತವಾಗಿ ಪೊಲೀಸರಿಂದಲೋ, ಹಸ್ಲರ್‌ನಿಂದಲೋ ಅಥವಾ ಇತರರಿಂದಲೋ ಬ್ಲಾಕ್‌ಮೇಲ್ ಆಗುವ ಭಯದಲ್ಲೇ ಬದುಕುತ್ತೀರಿ. ನಿಮ್ಮನ್ನು ಯಾರಾದರೂ ಮಾನಭಂಗ ಮಾಡಿದರೂ ಕೂಡ ಕೂಗಲಾಗದ ಸ್ಥಿತಿ ನಿಮ್ಮದು.

### ಅಸಹಾಯಕತೆ ಹಾಗೂ ಅವಮಾನ

ಸಲಿಂಗಿಯಾಗಿದ್ದಕ್ಕಾಗಿ ನನ್ನನ್ನು ನಾನೇ ತಿರಸ್ಕರಿಸಲು ಪ್ರಾರಂಭಿಸಿದ್ದಷ್ಟೇ ಅಲ್ಲ, ನನ್ನ ಲೈಂಗಿಕತೆ ಬಗ್ಗೆ ಯಾವಾಗಲೂ ಮುಚ್ಚಿಡಬೇಕಾದ ಅವಮಾನವನ್ನು ಅನುಭವಿಸಿದೆ. ನಾನೇಕೆ ಸಲಿಂಗಿಯಾದೆ? ಯಾರಾದರು ನನ್ನನ್ನು ರೂಪಾಂತರಿಸಿದರೇನು? ನಾನು ಪರಿಪೂರ್ಣ ಪುರುಷನಲ್ಲವೇ? ನಾನೇಕೆ ಇಷ್ಟು ಸೂಕ್ಷ್ಮಮತಿ? ಎಂಬಿತ್ಯಾದಿ ಪ್ರಶ್ನೆಗಳು ನನ್ನನ್ನು ಘಾಸಿಗೊಳಿಸಿದವು. ಯಾರಾದರೂ (ಅಂದರೆ ಸಹಪಾಠಿಗಳು, ಸ್ನೇಹಿತರು, ಸಮಾಜ ಕಾರ್ಯಕರ್ತ ಮಿತ್ರರು) ನನ್ನ ಗೇ ಎಂದು ಕಂಡುಹಿಡಿದರೆ? ಎಂಬ ಯೋಚನೆ ಬಂದಾಗಲೊಮ್ಮೆ ನನ್ನ ದೇಹ ಇದ್ದಕ್ಕಿದ್ದಂಥಲೇ ಭಯದಿಂದ ಅದುರಲಾರಂಭಿಸುತ್ತಿತ್ತು..... ಅವಮಾನಿತನಾಗಿ ನಾನು ನನ್ನ ಉಳಿದ ಜೀವನ ಕಳೆಯಬಲ್ಲೆನೇ? ಭಿನ್ನಲಿಂಗಿ ಎಂದು ನಟಿಸುವಾಗಲೆಲ್ಲ ನಾನು ಘೋರತೆಯನ್ನು ಅನುಭವಿಸುತ್ತಿದ್ದೆ. ಕತ್ತಲೆಯ ಪರದೆಯಲ್ಲಿ ಮಾತ್ರ ನನ್ನ ಲೈಂಗಿಕತೆಯ ಒಡೆಯನಾಗಿದ್ದೆ. ಎಲ್ಲೆಲ್ಲೂ ಹೆಸರಿಲ್ಲದ ವ್ಯಕ್ತಿಗಳಿಂದ ಕೂಡಿದ ಈ ಪ್ರಪಂಚದಲ್ಲಿ ನಾನಿದನ್ನು ಅದುಮಿಡಲೇಬೇಕಿತ್ತು. ಇಬ್ಬಗೆಯ ಜೀವನ ನನ್ನನ್ನೇ ಚಿಗಿಯಿತು. ನನ್ನ ಲೈಂಗಿಕತೆಯನ್ನು ಅದುಮಿಟ್ಟಿದ್ದು ಪ್ರಯೋಜನಕ್ಕೆ ಬರಲಿಲ್ಲ.

ಯೌವನಾವಸ್ಥೆಗೇ ತರುಣರಾದ ನೀವು ನಿಮ್ಮ ಲೈಂಗಿಕತೆ, ಲೈಂಗಿಕತೆಯ ಗುರ್ತಿಸುವಿಕೆ, ಲೈಂಗಿಕ ಅಪೇಕ್ಷೆ/ಆಕರ್ಷಣೆ ಇತ್ಯಾದಿಗಳ ಬಗ್ಗೆ ತುಂಬಾ ಅನುಮಾನ ಹಾಗೂ ಗಲಿಬಿಲಿಗಳನ್ನು ಹಾದು ಹೋಗುತ್ತೀರಿ. ಅತೀ ಕಡಿಮೆ ಮಾಹಿತಿ ಹಾಗೂ ಈ ವಿಷಯಗಳ ಬಗ್ಗೆ ಮುಕ್ತವಾಗಿ ಒಪ್ಪಿಸಲಾಗಲೀ ಅಥವಾ ಮಾತನಾಡಲಾಗಲಿ ಅತೀ ಕಡಿಮೆ ಜನರು ದೊರಕುವುದು ಇಂಥಹ ತುಮುಲಗಳನ್ನು ಹಾದು ಹೋದರೂ ಅವು ಮತ್ತಷ್ಟು ತೀಕ್ಷ್ಣವಾಗಲು ಕಾರಣವಾಗಿದೆ. ಬಹಳ ಜನ ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ಉದಾತ್ತ ಹಾಗೂ ಪ್ರಗತಿಶೀಲರಾಗಿರುವವರು ಲೈಂಗಿಕತೆಯ ವಿಷಯ ಬಂದಾಗ ಪೂರ್ವಗ್ರಹಿತರಾಗಿರುತ್ತಾರೆ. ಅವರಲ್ಲಿ ಕಮ್ಯುನಿಸ್ಟ್, ಸೋಷಿಯಲಿಸ್ಟ್, ಟ್ರೇಡ್ ಯೂನಿಯನಿಸ್ಟ್, ಪರಿಸರವಾದಿ, ಗಾಂಧಿವಾದಿ, ದಲಿತ ಕಾರ್ಯಕರ್ತ, ಕೆಲವು ಮಾನವ ಹಕ್ಕು ಹಾಗೂ ಸ್ತ್ರೀವಾದಿ ಕಾರ್ಯಕರ್ತರೂ ಇದ್ದಾರೆ. ನನ್ನ ನಾಲ್ಕು ವರ್ಷದ ವಿದ್ಯಾರ್ಥಿ ಸಂಘಟನೆಯಲ್ಲಿ ಸಕ್ರಿಯ ಪಾತ್ರದಲ್ಲಿ ನಾನೆಂದೂ ನನ್ನ ಸಹ ಕೆಲಸಗಾರರೊಂದಿಗೆ ನನ್ನ ಲೈಂಗಿಕತೆಯ ಬಗ್ಗೆ ಹೊರಗೆಡುವಷ್ಟು ಧೈರ್ಯ ಹೊಂದಿರಲಿಲ್ಲ. ಸ್ವಲೈಂಗಿಕತೆಯ ಮಾತಿರಲಿ, ಲಿಂಗ ಹಾಗೂ ಲೈಂಗಿಕತೆಯ ಬಗೆಗಿನ ಚರ್ಚೆ ಕೂಡ ಈ ಸಂಘಟನೆಗಳಲ್ಲಿ ನಿರ್ಬಂಧವಿದೆ/ನಿಷೇಧವಿದೆ.

ಬರೋಡಾದ ಒಂದು ಹೆಸರಾಂತ ಕಂಪ್ಯೂಟರ್ ಕಂಪನಿಗೆ ೧೯೯೦ರಲ್ಲಿ ಹಾರ್ಡ್‌ವೇರ್ ಇಂಜಿನಿಯರ್ ಆಗಿ ಸೇರಿಕೊಂಡೆ. ನಾನಲ್ಲಿ ೧೮ ತಿಂಗಳು ಕೆಲಸ ಮಾಡಿದೆ. ಆಗಾಗ್ಗೆ ಕ್ರೂಸಿಂಗ್ ಜಾಗಕ್ಕೆ ಹೋಗಿ ೪-೫ ಜನರನ್ನು ನಿರಂತರವಾಗಿ ಭೇಟಿಯಾಗಲು ಪ್ರಾರಂಭಿಸಿದೆ. ಅವರಲ್ಲಿ ಇಬ್ಬರು ಕೆಲಸ ಮಾಡುವ ಸ್ಥಳ ಪತ್ತೆ ಮಾಡುವುದರಲ್ಲಿ ಯಶಸ್ವಿಯಾದೆ. ಅವರ ಮಾತುಕತೆ, ಅವರು ಯಾರೊಂದಿಗೆ ಸೆಕ್ಸ್ ಹೊಂದಿದರು, ಸೆಕ್ಸ್ ಯಾರೊಂದಿಗೆ ಬಯಸುತ್ತಾರೆ, ಇಲ್ಲಿಗೆ ಯಾರು ಹೊಸಬರು, ಪೊಲೀಸ್ Hustler (ಹಸ್ಲರ್) ಕೈಗೆ ಸಿಕ್ಕಿ ಹಾಕಿಕೊಂಡರೆ ಯಾವ ಮುಂಜಾಗುರುಕತೆ ವಹಿಸಬೇಕು ಎಂಬುದರ ಸುತ್ತಲೇ ಸೀಮಿತವಾಗಿರುತ್ತಿತ್ತು. ಹೆಚ್ಚಿನವರು ಆಗಲೇ ಮದುವೆಯಾಗಿದ್ದವರು. ಅವರ‍್ಯಾರೂ ತಮ್ಮ ಬದುಕನ್ನು ಮದುವೆಯೆಂಬ ಪರದೆಯಿಲ್ಲದೆ ನಡೆಸಲು ತಯಾರಿರಲಿಲ್ಲ. ಇದೇನೇ ಇರಲಿ ಕೆಲವರನ್ನಾದರೂ ಮೇಲಿಂದ ಮೇಲೆ ಸಂಧಿಸಲು ಆಗಿದ್ದರಿಂದ ನನ್ನ ಸಲಿಂಗದ ಬಗ್ಗೆ ಸ್ವಲ್ಪ ನೆಮ್ಮದಿ ಬಂತು. ನನಗೊಬ್ಬ ಪ್ರಿಯಕರನನ್ನು ಬಯಸಿದೆ. ಯಾವುದೇ ಹೆಣ್ಣನ್ನು ಮದುವೆಯಾಗದೆ ಜೀವನ ಸಾಗಿಸಲು ಬಯಸಿದೆ.

"ಬಾಂಬೇ ಡಾಸ್ಟ್" ಎಂಬ ಗೇ ಪತ್ರಿಕೆಯ ಬಗ್ಗೆ "ಆಂಧ್ರ ಜ್ಯೋತಿ" ತೆಲುಗು ಪತ್ರಿಕೆಯಲ್ಲಿ ೧೯೯೨ರಲ್ಲಿ ಬಂದ ಲೇಖನ ಓದಿದೆ. ಆ ಲೇಖನದಲ್ಲಿ ಪತ್ರಿಕೆಯ ವಿಳಾಸವಿರಲಿಲ್ಲ. ನನಗೆ ಗೇ ಪತ್ರಿಕೆಯೊಂದಿರುವುದು ತಿಳಿದು ಮಹಾನಂದವಾಯಿತು. ಒಂದು ತಿಂಗಳೊಳಗಾಗಿ ನಾನು ಬಾಂಬೆಯಲ್ಲಿ ಕೆಲಸ ಪಡೆದೆ. ಮುಂಬೈ ಜೀವನದ ನನ್ನ ಒಂದಂಶದ ಕಾರ್ಯಕ್ರಮ ಬಾಂಬೆ ಡಾಸ್ಟ್ ಸಂಪರ್ಕಿಸುವುದೇ ಆಗಿತ್ತು, ಹಾಗಾಗಿ ಕ್ರೂಸಿಂಗ್ ಸ್ಥಳಗಳಲ್ಲಿ ನಾನು

ಸಂಧಿಸಿದ ಪ್ರತಿಯೊಬ್ಬರನ್ನೂ ಇದರ ಬಗ್ಗೆ ಕೇಳಿದೆ. ನನ್ನ ಎಡೆಬಿಡದ ಪರಿಶ್ರಮದಿಂದಾಗಿ ಮೂರು ತಿಂಗಳ ನಂತರ ಬಾಂಬೆ ದಾಸ್ತನ ಸಂಪರ್ಕ ದೊರೆಯಿತು.

**ಸ್ಪಷ್ಟ/ಧನಾತ್ಮಕ ಬದಲಾವಣೆ :-**

ನನ್ನ ಜೀವನವೊಂದು ಧನಾತ್ಮಕ ಬದಲಾವಣೆ ಗೊಳಪಟ್ಟಿದ್ದು ಮುಂಬೈನಲ್ಲಿ. ನಾನು ಕೆಲವು ಸ್ನೇಹಿತರನ್ನೂ ಪಡೆದುದ್ದಲ್ಲದೆ ಅವರೊಂದಿಗೆ ನನ್ನ ಲೈಂಗಿಕತೆಯ ಬಗ್ಗೆ ಚರ್ಚಿಸಿದೆ. ತಮ್ಮ ಲೈಂಗಿಕತೆಯ ಬಗ್ಗೆ ನೆಮ್ಮದಿಯಿಂದ ಇದ್ದ ಸಲಿಂಗ ಪುರುಷರನ್ನು ಸಂಧಿಸಿದ್ದು ವಿಶೇಷ, ಅವರ್‍ಯಾರು ಮದುವೆ ಎಂಬ ಪರದೆಯಡಿಯಲ್ಲಿ ತಮ್ಮ ಲೈಂಗಿಕತೆಯನ್ನು ಅಡಗಿಸಿಡಲು ಬಯಸಿದವರಲ್ಲ. ಕೆಲವರು ಒಂಟಿ ಜೀವನ ನಡೆಸುತ್ತಿದ್ದಾರೆ. ಬಹು ಬೇಗ ತನ್ನ ಲೈಂಗಿಕತೆಯ ಬಗ್ಗೆ ಒಂದು ಹಂತಕ್ಕೆ ಬರಲು ಇದು ಕಾರಣವಾಯಿತು. ಮೂರು ತಿಂಗಳೊಳಗಾಗಿ ನಾನು ಪ್ರಿಯಕರನನ್ನು (Boy friend) ಪಡೆದೆ. ಫೆಬ್ರುವರಿ ೯೪ರಿಂದ ನಾವು ಜೊತೆಯಾಗಿ ವಾಸಿಸಲು ಪ್ರಾರಂಭಿಸಿದೆವು. (ಈಗಲೂ ಜೊತೆಗೇ ಇದ್ದೇವೆ).

ಬಾಕ್ಸ್ ಫೈಲ್ ತುಂಬಾ ಪರ್ಯಾಯ ಲೈಂಗಿಕತೆ ಎಂಬ ವಿಷಯದ ಬಗ್ಗೆ ಪತ್ರಿಕೆಯ ತುಣುಕುಗಳಿರುವುದನ್ನು ಮುಂಬೈನ ಸೆಂಟರ್ ಫಾರ್ ಎಜುಕೇಷನ್ ಅಂಡ್ ಡಾಕ್ಯುಮೆಂಟೇಷನ್ (C.E.D.) ಎಂಬ ಸಂಸ್ಥೆಯಲ್ಲಿ ಕಂಡು ಸಂಭ್ರಮಗೊಂಡೆ. ವಿದ್ಯಾರ್ಥಿಗಳೊಂದಿಗೆ/ಯುವಕರೊಂದಿಗೆ/ಎಡಪಂಥೀಯರೊಂದಿಗೆ/ಪರಿಸರದ ಚಳುವಳಿಗಳೊಂದಿಗಿನ ನನ್ನ ಕೆಲಸದಿಂದಾಗಿ ಗೇ/ಸಲಿಂಗಿಗಳು ಹೇಗೆ ತುಳಿತಕ್ಕೊಳಗಾಗುತ್ತಾರೆ ಎಂಬುದನ್ನು ಅರ್ಥಮಾಡಿಕೊಳ್ಳಲು ಕಡಿಮೆ ಶ್ರಮ ಹಿಡಿಯಿತು. ೯೪ರಲ್ಲಿ ನನ್ನ ಪ್ರಿಯಕರ ಹಾಗೂ ಇತರೆ 5 ಜನ ಗೇ ಅನ್ನೊಳಗೊಂಡ "ಕುಷ್ ಕ್ಲಬ್" ಒಂದನ್ನು ಪ್ರಾರಂಭಿಸಲು ನಾನು ಸಾಧನವಾದೆ. ನಾವು ಗೇ ಜನರು ತಮ್ಮ ಲೈಂಗಿಕತೆಯ ಬಗ್ಗೆ ಹಂತಕ್ಕೆ ಬರಲು ಸಹಾಯವಾಗುವಂತೆ ಸಲಿಂಗದ ಬಗ್ಗೆ ಮಾಹಿತಿ ಸಹಾಯವಾಗುವಂತೆ ಸಲಿಂಗದ ಬಗ್ಗೆ ಮಾಹಿತಿ ಸಂಗ್ರಹಣೆ ಮಾಡಲು ಬಯಸಿದೆವು, ತಮ್ಮ ಲೈಂಗಿಕತೆಯ ಬಗ್ಗೆ ಗಲಿಬಿಲಿ ಹಾಗೂ ನೆಮ್ಮದಿಯಿಲ್ಲದವರಿಗಾಗಿ ಸಮಾಲೋಚನೆಯ ಜೊತೆಗೆ HIV/AIDS ಬಗ್ಗೆ 'ಗೇ' ಸಮುದಾಯಕ್ಕೆ ತಿಳುವಳಿಕೆ ಕೊಡಲು ನಾವು ಕೆಲವು ಸಾಮಾಜಿಕ ಕೂಟಗಳನ್ನು ಹಮ್ಮಿಕೊಳ್ಳುವುದರೊಂದಿಗೆ ಗೇ ಜನರು ಸುರಕ್ಷಿತ ಸ್ಥಳದಲ್ಲಿ ಸಂಧಿಸುವ ಅವಕಾಶ ಕಲ್ಪಿಸಿದೆವು. ಈ ಪ್ರಕ್ರಿಯೆಯಲ್ಲಿ ಮಹಿಳಾ ಚಳುವಳಿಯಲ್ಲೂ ಕೆಲವು ಲೆಸ್‌ಬಿಯನ್ ಕಾರ್ಯಕರ್ತೆಯರ ಪರಿಚಯ ನನಗಾಯಿತು. ಅವರ ಗುಂಪು 18 ತಿಂಗಳುಗಳ ಕಾಲ ಮಾತ್ರ ಉಳಿಯಿತು. ಗುಂಪು ಯಾವ ದಿಕ್ಕಿನಲ್ಲಿ ಹೆಜ್ಜೆಯಿಡಬೇಕು, ರಾಜಕೀಯವಾಗಿಯೋ ಅಥವಾ ಸಾಮಾಜಿಕವಾಗಷ್ಟೆ ಉಳಿಯಬೇಕೋ ಎಂಬ ಭಿನ್ನಾಭಿಪ್ರಾಯ ಛಿದ್ರವಾಗಲು ಕಾರಣವಾಯಿತು.

ಲೆಸ್‌ಬಿಯನ್ನರಿಗೆ ಈ ಸಮಾಜದಲ್ಲಿ ಅತ್ಯಲ್ಪ ಸ್ಥಳವಿದೆ. ಗೇ ಜನರಿಗೆ ಕನಿಷ್ಠ (50 ಬಾಂಬೆಯಲ್ಲಿ) ಕ್ರೂಸಿಂಗ್ ಸ್ಥಳಗಳಾದರೂ ಬಾಂಬೆಯಲ್ಲಿವೆ. ಆದರೆ ಒಬ್ಬ ಲೆಸ್‌ಬಿಯನ್ ಇನ್ನೊಬ್ಬ ಲೆಸ್‌ಬಿಯನ್‌ನನ್ನು ಸಂಧಿಸುವ ಸ್ಥಳವೇ ಇಲ್ಲ. ಕ್ರೂಸಿಂಗ್ ಸ್ಥಳ ಒಬ್ಬ ಗೇ ಮತ್ತೊಬ್ಬ ಗೇಯನ್ನು ಸಂಧಿಸಲು, ಗುರುತಿಸಲು ಅವಕಾಶ ಮಾಡಿಕೊಟ್ಟಿದೆ, ಲೆಸ್‌ಬಿಯನ್‌ಗಳಿಗೆ ಆ ಸಮಾಜಿಕ ಸ್ಥಳವೂ ಇಲ್ಲ. ಆ ಸಮಯದಲ್ಲಿ ಇಡೀ ಭಾರತದಲ್ಲಿ ಗೇ ಲೆಸ್‌ಬಿಯನ್ ಒಳಗೊಂಡ ಗುಂಪಿರಲಿಲ್ಲ. ಡೆಲ್ಲಿ, ಕಲ್ಕತ್ತಾ, ಮುಂಬೈ, ಬೆಂಗಳೂರು ಹಾಗೂ ಲಕ್ನೋ ನಗರಗಳಲ್ಲಿ ನಾಲ್ಕೈದಾದರೂ ಗೇ ಗುಂಪುಗಳಿವೆ. ಅವುಗಳಲ್ಲಿ ಒಂದೆರಡು ಗುಂಪುಗಳು ಲೆಸ್‌ಬಿಯನ್ನರಿಗೆ ತೆರೆದಿವೆ. ಆದರೆ ಅವು ಕೂಡ ಅವರಿಗೆ ಹಿತಕರವಾಗಿಲ್ಲ.

ಬಹಳ ಗೇ ಪುರುಷರು, ಸಕ್ರಿಯ ಕಾರ್ಯಕರ್ತರು ಪುರುಷ ಪ್ರಧಾನ ಸಮಾಜದ ಭಿನ್ನ ಲಿಂಗಿ ಪುರುಷರ ನಕಲುಗಳಂತೆ ಸ್ತ್ರೀ ವಿರೋಧಿ ಹೇಳಿಕೆ ಕೊಡುತ್ತಾರೆ. ಕನಿಷ್ಠ ಪಕ್ಷ ನಗರ ಹಾಗೂ ಪಟ್ಟಣಗಳಲ್ಲಿ ಮದುವೆಯಾದ ಗೇ ಅಥವಾ ದ್ವಿಲಿಂಗಿ ಪುರುಷರು ತಮ್ಮ ಲೈಂಗಿಕ ಅವಶ್ಯಕತೆ ಹೊಂದಲು ಸಾಧ್ಯವಿದೆ - ಆದರೆ ಮದುವೆಯಾದ ಲೆಸ್‌ಬಿಯನ್ನರು ತಮ್ಮ ಗಂಡನೊಂದಿಗಿನ ಲೈಂಗಿಕ ಸಂಪರ್ಕ ಒಲ್ಲೆಯೆನ್ನಲು ಸಾಧ್ಯವಿಲ್ಲ. ಅದೇ ಸಮಯದಲ್ಲಿ ಮದುವೆಯಾದ ಎಷ್ಟೋ ಗೇ ಪುರುಷರು ತಮ್ಮ ಹೆಂಡತಿಯ ಲೈಂಗಿಕ ತೃಷೆ ತಣಿಸಲು ಕೂಡ ಒಪ್ಪುವುದಿಲ್ಲ. ಈ ಮಹಿಳೆಯರು ಮೌನವಾಗಿ ಸಹಿಸುವುದಷ್ಟೇ ಅಲ್ಲದೆ ನನ್ನ ಗಂಡನನ್ನು ಆಕರ್ಷಿಸುವುದರಲ್ಲಿ ಸೋತಿರುವುದಾಗಿ ಮಾನಸಿಕ ತಜ್ಞರನ್ನು ಭೇಟಿಯಾಗುತ್ತಾರೆ. ಭಾರತದಲ್ಲಿರುವ ಬಹುತೇಕ ಗೇ ಗುಂಪು ಗೇ ಪುರುಷರು ಮಹಿಳೆಯರನ್ನು ಮದುವೆಯಾಗುವ ವಿಚಾರದಲ್ಲಿ ಯಾವುದೇ ನಿಲುವಿಗೆ ಬಂದಿಲ್ಲ. ಇದು ಹಾಗೂ ಇನ್ನಿತರ ಕಾರಣಗಳಿಂದಾಗಿ, ಗೇ ಗುಂಪಿನ ಭಾಗವಾಗುವುದು ಲೆಸ್‌ಬಿಯನ್ ಮಹಿಳೆಯರಿಗೆ ಕಷ್ಟವಾಗಿದೆ.

ಮುಂಬೈನಲ್ಲಿ ಕೆಲವು ಲೆಸ್‌ಬಿಯನ್ ಮಹಿಳೆಯರು ಹಾಗೂ ಗೇ ಪುರುಷರು (ಲಿಂಗ-ಸೂಕ್ಷ್ಮಮತಿಗಳು)ರನ್ನು ಸೇರಿಸಿ 1994ರಲ್ಲಿ 'ಗೇ ಹಾಗೂ ಲೆಸ್‌ಬಿಯನ್' ಫೋರಂ-ಕುಷ್ ಮಂಚ್ ಮಾಡಲು ನಾನು ಪ್ರಯತ್ನಿಸಿದೆ. ನಾವು ಲೈಂಗಿಕ ಹಾಗೂ ಕೋಮುವಾದಿಗಳನ್ನು ಇದರಿಂದ ಹೊರಗಿಡಲು ಬಯಸಿದುದರಿಂದ

ನಾವಿದನ್ನು ಕೋಮು ವಿರೋಧಿ, ಲೈಂಗಿಕ ವಿರೋಧಿ, ಪ್ರಜಾಪ್ರಭುತ್ವವಾದಿ, ಗೇ, ಲೆಸ್‌ಬಿಯನ್ ವೇದಿಕೆ ಎಂದು ಕರೆದೆವು. ವೇದಿಕೆಯಲ್ಲಿ ಮಹಿಳೆಯರ ಹೇಳುವಿಕೆಗೆ ಸಮಾನತೆ ಕೊಡಲು ಇಬ್ಬರನ್ನೊಳಗೊಂಡ (ಸ್ತ್ರೀ, ಪುರುಷ) ಸಹ ಪದಾಧಿಕಾರ ಬಯಸಿದೆವು. ಗುಂಪು ಸ್ವಾಭಾವಿಕವಾಗೇ ಕೆಲವು ತಿಂಗಳುಗಳ ನಂತರ ನಿಷ್ಕ್ರಿಯವಾದಾಗ ಅದರ ಸದಸ್ಯರು ತಾವು ಗೇ ಅಥವಾ ಲೆಸ್‌ಬಿಯನ್ ಎಂದೇ ಹೊರಬಂದು ಯಾವುದಾದರು ಸ್ವಯಂ ಸೇವಾ ಸಂಸ್ಥೆ ಅಥವಾ ಸಾಮಾಜಿಕ ಚಟುವಟಿಕೆಯಲ್ಲಿ ಭಾಗವಹಿಸಲು ನಿರ್ಧರಿಸಿದರು.

ನಾನು ಮುಂಬೈನಲ್ಲಿದ್ದಾಗ ನರ್ಮದಾ ಬಚಾವೊ ಆಂದೋಲನ ಹಾಗೂ ನಿರ್ಭಾವ್ ಬನೋ ಆಂದೋಲನದಲ್ಲಿ (ಕೋಮುವಾದ ಹಾಗೂ ಮೂಲಭೂತವಾದವನ್ನು ಎದುರಿಸಲು ಬಾಂಬೆಯ ಕೋಮು ಗಲಭೆಯಾದ ಮೇಲೆ ಹುಟ್ಟಿದ ವೇದಿಕೆ) ಸಕ್ರಿಯವಾಗಿದ್ದೆ. ತುಂಬಾ ಸಮಾಜ ಕಾರ್ಯಕರ್ತರೊಂದಿಗೆ ನಾನು ಹೊರಗೆಡವಿದೆ (ನನ್ನ ಸಲಿಂಗದ ಬಗ್ಗೆ). ಇದು ಕುಷ್‌ಮಂಚ್‌ನಲ್ಲಿ ನಾವು ಸಾಮಾಜಿಕ ಕಾರ್ಯಕರ್ತರೊಂದಿಗೆ ಸಲಿಂಗದ ಬಗ್ಗೆ ಕಾಣುವಂತೆ ಮಾಡಬೇಕೆಂದು ಎಚ್ಚರಿಕೆಯಿಂದ ತೆಗೆದುಕೊಂಡ ನಿರ್ಣಯವೇ ಆಗಿತ್ತು. ತುಂಬಾ ಮಹಿಳೆಯರು ಬೆಂಬಲಿಸಿದರು. (ಹೆಚ್ಚಾಗಿ ಸ್ತ್ರೀವಾದಿ ಗುಂಪಿನವರು), ಕೆಲವರು ನನ್ನ ಲೈಂಗಿಕತೆಯ ಬಗ್ಗೆ ತಿಳಿದಿಲ್ಲವೇನೋ ಅಥವಾ ಕೇಳಿಲ್ಲವೇನೋ ಎಂಬಂತೆ ವರ್ತಿಸಿದರು. ಕೆಲವರು ನನ್ನ ಬಳಿ ಬರುವುದನ್ನೂ ಕೂಡ ನಿಲ್ಲಿಸಿದರು - ಪಾಪ ಅವರು ಸಲಿಂಗ ಒಂದು ಅಂಟು ರೋಗವೆಂದು ತಿಳಿದಿರಬಹುದು. ಕೆಲವರು ನನ್ನೊಂದಿಗೆ ಮಾತು ನಿಲ್ಲಿಸಿದರು. ಕೆಲವು ಕುಷ್‌ಮಂಚ್‌ನಲ್ಲಿದ್ದ ಲೆಸ್‌ಬಿಯನ್ ಮಹಿಳೆಯರೊಂದಿಗೆ ಸಮಾಜಿಕ ಸಕ್ರಿಯ ಗುಂಪಿನಲ್ಲಿ ಗೇ ಮತ್ತು ಲೆಸ್‌ಬಿಯನ್‌ರ ಹಕ್ಕಿಗಾಗಿ ಅವರನ್ನು ತುಳಿತಕ್ಕೆ ಒಳಗಾದವರೆಂದು ನೋಡಬೇಕೆಂದು ಬೆಂಬಲಿಸುವಂತೆ ಪ್ರೇರೇಪಿಸಲು ಪ್ರಯತ್ನಿಸಿದೆ. ಇದು ನನಗೆ ಮುಖ್ಯವೇಕೆಂದರೆ ಕೆಲವು ಮುಖ್ಯ ಗೇ ಕಾರ್ಯಕರ್ತರೇ ಹಿಂದುತ್ವದ ಹಾಗೂ ಕೋಮುವಾದದ ಸಕ್ರಿಯ ಪ್ರತಿಪಾದಕರು.

**ದ್ವಿಲೈಂಗಿಕತೆಯನ್ನು ಅಂಗೀಕರಿಸಿದ್ದು :**

ನಾನು ನನ್ನ ಆತ್ಮೀಯ ಗೆಳತಿಯೊಬ್ಬಳು ಪ್ರೀತಿಸಲು ಪ್ರಾರಂಭಿಸಿದ್ದು ನನಗೊಂದು ಆಘಾತದಂತಾಯ್ತು. ನಾನು ದ್ವಿಲಿಂಗಿ ಎಂಬುದನ್ನು ನನಗೆ ನಂಬಲಾಗಲಿಲ್ಲ. ನನ್ನ ಭಿನ್ನ ಲೈಂಗಿಕತೆಯನ್ನು ಒಪ್ಪಿಕೊಳ್ಳುವುದು ನನಗೆ ಬಹಳ ಕಷ್ಟವಾಯ್ತು. ಗೇ ಸಮುದಾಯ/ಸಂಸ್ಕೃತಿಯ ಬಳುವಳಿಯಾಗಿ ನಾನು ಭಿನ್ನ ಲಿಂಗಿಗಳು, ಭಿನ್ನ ಲೈಂಗಿಕತೆಯ ಬಗ್ಗೆ ನೆಗೆಟೀವ್ ಭಾವನೆ ಬೆಳೆಸಿಕೊಂಡಿದ್ದೆನೆಂಬ ಅರಿವು ಮೊದಲು ಬಾರಿ ನನಗಾಯ್ತು. ನನ್ನ ದ್ವಿಲೈಂಗಿಕತೆಯನ್ನು ಶಬ್ದಕ್ಕೆ ತರಲು ನಾನು ನನ್ನ ಸ್ನೇಹಿತರ ಸಹಕಾರ ಬಯಸಿದೆ. ಸಕ್ರಿಯ ಕಾರ್ಯಕರ್ತರನ್ನೊಳಗೊಂಡರಂತೆ ಗೇ ಗೆಳೆಯರು ತಣ್ಣನೆಯ, ಬೆಂಬಲರಹಿತ, ಸೂಕ್ಷ್ಮಮತಿ ಗಳಲ್ಲದವರು. ದ್ವಿಲೈಂಗಿಯಾಗಿ ನನಗೆ ಯಾವುದೇ ಜಾಗ ಇರುವ ಗೇ ಗುಂಪಿನಲ್ಲಿಲ್ಲವೆಂದು ನಾನು ತಕ್ಷಣ ಮನಗೊಂಡೆ. ಇಂಥ ಸಂಕಷ್ಟದ ಸಮಯದಲ್ಲಿ ನಾನು ನನ್ನ ದ್ವಿಲೈಂಗಿಕತ್ವದ ಪರಿಭಾಷೆಗೆ ಬರಲು ನೆರವಿಗೆ ಬಂದವರು 'ಫೋರ್ ಎಗೆನೆಸ್ಟ್ ಅಪ್ರೆಷನ್ ಆಫ್ ವುಮೆನ್' ಎಂಬ ವೇದಿಕೆಯ ಸ್ತ್ರೀವಾದಿ ಗೆಳತಿಯರು'.

1994ರಲ್ಲಿ ಬೆಂಗಳೂರಿಗೆ ಬಂದೆ, ಸ್ಥಳೀಯ ಗೇ ಗುಂಪಾದ "ಗುಡ್ ಯಾಸ್ ಯು"ನಲ್ಲಿ ವಾರಕ್ಕೊಮ್ಮೆ ನಡೆಯುತ್ತಿದ್ದ ಸಭೆಗಳಿಗೆ ಹೋಗಲು ಪ್ರಾರಂಭಿಸಿದೆ. ಆ ಇಡೀ ಗುಂಪಿನಲ್ಲಿ ದ್ವಿಲೈಂಗಿ ಎಂದು ಗುರುತಿಸಲ್ಪಟ್ಟವನು ನಾನೊಬ್ಬನೇ. ಬಹಳ ವಿರಳವಾಗಿ ಕೆಲವು ಮಹಿಳೆಯರು ಆಗಾಗ್ಗೆ ಮೀಟಿಂಗ್‌ಗೆ ಬರುತ್ತಿದ್ದರು. ಗುಂಪಿನ ಕೆಲವರಿಗೆ ದ್ವಿಲೈಂಗಿಕತೆಯ ಬಗ್ಗೆ ವಿರೋಧವಿದ್ದುದರಿಂದ ಆ ವಿಷಯ ಚರ್ಚೆಗಾಗಿ ಎತ್ತಿಕೊಳ್ಳುವುದು ಕಷ್ಟವಿತ್ತು. ತುಂಬಾ ಗೇ ಪುರುಷರು (ಮದುವೆಯಾಗಿದ್ದವರೂ ಸಹ) ದ್ವಿಲೈಂಗಿಕತೆಯ ವಿರೋಧಿಗಳು. ನನ್ನನ್ನು ಗೇಯಾಗಿರುವೆಯೋ ಅಥವಾ ಎಲ್ಲರಂತಿರುವೆಯೋ ನಿರ್ಧರಿಸು ಎಂದು ಕೇಳಿದರು. ಸಾಮಾನ್ಯವಾಗಿ ದ್ವಿಲೈಂಗಿಗಳೆಂದರೆ, ತಮ್ಮ ಲೈಂಗಿಕತೆಯ ಬಗ್ಗೆ ಗಲಿಬಿಲಿ ಹಾಗೂ ಖಚಿತತೆಯಿಲ್ಲದವರು ಅಥವಾ ತಾವು ಸಲಿಂಗಿ/ಗೇ ಎಂದು ಒಪ್ಪಿಕೊಳ್ಳುವ ಧೈರ್ಯ, ಗಡುಸುತನವಿಲ್ಲದೆ ಸಮಾಜದಲ್ಲಿ ಮನ್ನಣೆ ಪಡೆಯಲು ಇದನ್ನು ಬಳಸಿಕೊಂಡವರು. ಅವರು ಭಿನ್ನ ಲೈಂಗಿಗಳಲ್ಲಷ್ಟೇ ಅಲ್ಲದೇ ಗೇ ಪುರುಷರಿಂದಲೂ ಭೇದಭಾವಕ್ಕೊಳಪಡುತ್ತಾರೆ. ನನ್ನ ದ್ವಿಲೈಂಗಿಕತ್ವದ ಬಗ್ಗೆ ಗುಂಪಿಗೆ ತಿಳಿಸಿ ಪರಿಣಾಮ ಎದುರಿಸಲು ನಿರ್ಧರಿಸಿದೆ.

**ದ್ವಿಲೈಂಗಿಕತೆಯ ಅಂಗೀಕಾರ :-**

ನಾನು ನಾಲ್ಕು ವರ್ಷದಿಂದ "ಗುಡ್ ಯಾಸ್ ಯು"ನ ಎಲ್ಲಾ ಮೀಟಿಂಗ್‌ಗಳಲ್ಲಿ ಭಾಗವಹಿಸುತ್ತಾ ಬಂದಿದ್ದೇನೆ, ಆದರೆ ನನ್ನ ದ್ವಿಲೈಂಗಿಕತೆಯಿಂದಾಗಿ ಇಡೀ ಗುಂಪಿನಲ್ಲಿ ನಾನು ಪರಕೀಯ ಭಾವನೆ ಅನುಭವಿಸಿದ್ದೇನೆ. ಗುಂಪಿನ ಕೆಲವು ಪುರುಷರಿಗೆ ನಿರ್ದಿಷ್ಟವಾಗಿ ತಾವು ದ್ವಿಲೈಂಗಿಗಳೆಂದು ಗುರುತಿಸಿಕೊಂಡು ಹೊರಬರಲು ಮೂರು ವರ್ಷಗಳಷ್ಟು ಕಾಲ ತೆಗೆದುಕೊಂಡಿತು. ಈಗ ಮುಕ್ತವಾಗಿ ದ್ವಿಲೈಂಗಿಗಳೆಂದು ಗುಂಪಿನಲ್ಲಿ ಗುರುತಿಸಲ್ಪಟ್ಟವರು ಹತ್ತು ಮಂದಿ ಇದ್ದೇವೆ. ಅವರಲ್ಲಿ ಕೆಲವರಿಗೆ ನಿರಂತರವಾಗಿ ಮೀಟಿಂಗಿಗೆ ಬರಲಾಗುವುದಿಲ್ಲ. ಭಾರತದ ಬಹು ಗೇ ಗುಂಪುಗಳಲ್ಲಿ ದ್ವಿಲೈಂಗಿಗೆ ಸ್ವಾಗತವಿಲ್ಲ. 'ಗುಡ್ ಯಾಸ್ ಯು' ಬಿಟ್ಟು ಇನ್ನು ಕೆಲವು ಗುಂಪುಗಳಲ್ಲಿ ಇವರಿಗೆ ಅವಕಾಶವಿದೆ.

ಭಾರತದಲ್ಲಿ ಹೆಸರಿರುವ ಗೇ ಕಾರ್ಯಕರ್ತರ್ಯಾರು ದ್ವಿಲೈಂಗಿಗಳಲ್ಲ. ಗೇ/ಲೆಸ್‌ಬಿಯನ್ ಗುಂಪಿನಲ್ಲಿ ದ್ವಿಲೈಂಗಿಗಳ ವಿಷಯದ ಬಗ್ಗೆ ಚರ್ಚೆಯಾಗಲಿ ಅವರ ಹಕ್ಕುಗಳ ಬಗೆಗಿನ ವ್ಯಾಖ್ಯಾನವಾಗಲಿ ಅತೀ ವಿರಳ. "ಗುಡ್ ಯಾಸ್ ಯು" ಗೇ ಹಾಗೂ ದ್ವಿಲೈಂಗಿ ಪುರುಷರಿಗೆ ಸುರಕ್ಷಿತ ಸ್ಥಳ ಆದರೂ ಲೆಸ್‌ಬಿಯನ್ ಗೇ ಬೈಸೆಕ್ಷುಯಲ್ (Lesbigays)ಗಳ ಮೇಲೆ ಪರಿಣಾಮ ಬೀರಬಲ್ಲ ವಿಷಯಗಳ ಬಗ್ಗೆ ಕೂಡ ರಾಜಕೀಯ ಅಥವಾ ಮಹತ್ವದ ಆಲೋಚನೆ ನಡೆಯುವುದೇ ಇಲ್ಲ. ಬಹಳ ಜನ ಸದಸ್ಯರ ಅಭಿಪ್ರಾಯದ ಪ್ರಕಾರ ಇಲ್ಲಿ ಚಟುವಟಿಕೆಗೆ ಯಾವುದೇ ಅವಕಾಶವಿಲ್ಲ.

ಬೆಂಗಳೂರಿನ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾದಲ್ಲಿ ಸೆಪ್ಟೆಂಬರ್ ೧೯೯೭ರಲ್ಲಿ "ಗೇ ಹಕ್ಕುಗಳು" ಎಂಬುದರ ಬಗ್ಗೆ ವಿಚಾರಗೋಷ್ಠಿ ಏರ್ಪಾಡಾಗಿತ್ತು. 'ಗುಡ್ ಯು' ಮೂಲಕ ಈ ವಿಚಾರ ಗೋಷ್ಠಿ ಹಿಂದಿನ ಮುಖ್ಯ ಶಕ್ತಿಯಾದ ಸಂಜಯ್ ಬಾವಿಕಟ್ಟೆಯ ಪರಿಚಯವಾಯಿತು. ಇದನ್ನು ಏರ್ಪಡಿಸಿದವರು ಭಿನ್ನ ಲೈಂಗಿಗಳು. ಗೇ ಜನ ತುಳಿತಕ್ಕೊಳಗಾದವರು ಎಂದು ಅವರು ಭಾವಿಸಿದ್ದುದರಿಂದ ಅವರು ಗೇ ಹಕ್ಕುಗಳಿಗೆ ಬೆಂಬಲ ಸೂಚಿಸಲು ಬಯಸಿದರು. ಲಿಂಗನ್ಯಾಯದ ಬಗ್ಗೆ ಅವರ ಸ್ಟಡಿ ಗುಂಪಿನ ಈ ಪ್ರಯತ್ನ ನನ್ನಲ್ಲಿ ಲೆಸ್‌ಬೈಗೇ (Lesbigay) ಮತ್ತು ಇತರರನ್ನೊಳಗೊಂಡು (ಇವರ ಸಮಸ್ಯೆಗೆ ಸ್ಪಂದಿಸುವವರು) ಲೆಸ್‌ಬೈಗೇ ಹಕ್ಕುಗಳಿಗೆ ಬೆಂಬಲಿಸುವ ಒಂದು ಗುಂಪನ್ನು ಹುಟ್ಟುಹಾಕಲು ಪ್ರೇರೇಪಿಸಿತು, ನನ್ನ ಕೆಲವು ಸ್ನೇಹಿತರಲ್ಲಿ (ಲೆಸ್‌ಬಿಯನ್ ಬೈಸೆಕ್ಷುಯಲ್ ಗೇ ಹಾಗೂ ಭಿನ್ನ ಲೈಂಗಿಗಳೊಡನೆ) ಇದರ ಬಗ್ಗೆ ಚರ್ಚಿಸಿ ಒಂದು ಮೀಟಿಂಗ್ ಕರೆದೆ. ಈ ಮೀಟಿಂಗಿಗೆ ಕೆಲವು ಗುಡ್ ಯಾಸ್ ಯುನ ಸದಸ್ಯರು, ಭಿನ್ನ ಲೈಂಗಿ ಸ್ನೇಹಿತರು ಹಾಗೂ ಬಹಳ ಮಂದಿ NLSIV ವಿಚಾರಗೋಷ್ಠಿಯ ನಿರ್ವಾಹಕರು ಬಂದರು. ಅವರೆಲ್ಲರು ಇಂತಹ ಒಂದು ಗುಂಪಿನ ಅವಶ್ಯಕತೆ ಇರುವುದನ್ನು ಅರಿತು ವಿಚಾರಗೋಷ್ಠಿಗೆ ಸ್ವಲ್ಪದಿನಗಳ ಮುಂಚೆಯಷ್ಟೆ ಇಂತಹ ಗುಂಪೊಂದರ ಹುಟ್ಟಿಗೆ ಕಾರಣವಾದರು.

ನಾವು ಎರಡು ವಾರಕ್ಕೊಮ್ಮೆ ಸೇರಲು ಪ್ರಾರಂಭಿಸಿದೆವು. ಇಲ್ಲಿ ಲೆಸ್‌ಬೈಗೇ (ಲೆಸ್‌ಬಿಯನ್, ಬೈಸೆಕ್ಷುಯಲ್ ಗೇ)ಗಳಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. ಸಲೈಂಗಿಕತೆಯ ಬಗ್ಗೆ ಅಷ್ಟೇ ಅಲ್ಲದೆ ಭಿನ್ನ ಲೈಂಗಿಕತೆಯ ಬಗೆಗಿನ ಮಾಹಿತಿ ಹಾಗೂ ಅದೇ ವಿಷಯದ ಬಗ್ಗೆ ಹುಡುಕುವಿಕೆಯ/ಪತ್ತೆಯ ಕೊರತೆ ಗುಂಪಿನ ಅರಿವಿಗೆ ಬಂತು. ಹೆಣ್ಣು ಮಕ್ಕಳನ್ನು ಹಾಗೂ ಲೆಸ್‌ಬೈಗೇಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಅದುಮಿಟ್ಟ ಸಂದರ್ಭದಲ್ಲಿ ನಮ್ಮನ್ನು ನಾವು "ಸಬ್‌ರಂಗ್" (ಎಲ್ಲಾ ಬಣ್ಣ) ಎಂದು ಕರೆದುಕೊಳ್ಳಲು ತೀರ್ಮಾನಿಸಿದೆವು. ಇದು ಗೇ, ಲೆಸ್‌ಬಿಯನ್, ಬೈಸೆಕ್ಷುಯಲ್, ಹೆಟ್ರೋ ಸೆಕ್ಷುಯಲ್, ಟ್ರಾನ್ಸ್-ಸೆಕ್ಷುಯಲ್ ಹಾಗೂ ಇತರರಿಗೂ ಸ್ಥಳಾವಕಾಶ ಮಾಡಿಕೊಡುವುದೆಂದು ಸೂಚಿಸುತ್ತದೆ. ಕೋಮು ವಿರೋಧಿ, ಸೆಕ್ಸ ವಿರೋಧಿ ಹಾಗೂ ಅನೇಕ ಜನರನ್ನೊಳಗೊಂಡ ರಾಜಕೀಯ ಸಿದ್ಧಾಂತದಲ್ಲಿ ನಂಬಿಕೆಯಿದೆ. ಲೆಸ್‌ಬೈಗೇ ವಿಚಾರವನ್ನು ಹಾಗೂ ಲೈಂಗಿಕತೆಯನ್ನು ಕೂಡ ಸಾರ್ವಜನಿಕ ವ್ಯಾಖ್ಯಾನಕ್ಕೆ ತರಲು ಮತ್ತು ಸಾಮಾನ್ಯವಾಗಿ ಲೈಂಗಿಕತೆಯ ಬಗ್ಗೆ ಇರುವ ತಪ್ಪುಹಾಗೂ ಸುಳ್ಳು ಮಾಹಿತಿಯ ವಿರುದ್ಧ ಹೋರಾಡಲು ನಾವು ಬಯಸುತ್ತೇವೆ. ಲೈಂಗಿಕತೆಯ ಬಗೆಗಿನ ಮಾಹಿತಿ, ದಾಖಲಾತಿ, ಪ್ರಕಟಣೆ ಹಾಗೂ ಪ್ರಸಾರ ಬಯಸುವೆವಲ್ಲದೆ ಯಾರಾದರೊಬ್ಬರು ಅವರ ಲೈಂಗಿಕತೆಯ ಕಾರಣಕ್ಕಾಗಿ ಭೇದ ಭಾವ ಅನುಭವಿಸುವುದನ್ನು ವಿರೋಧಿಸುತ್ತೇವೆ. ಯಾವುದೇ ಲಿಂಗ, ಜಾತಿ, ವರ್ಗ, ಧರ್ಮ, ಭಾಷೆ..... ಜನರ ಹಕ್ಕು, ಇವುಗಳಿಂದಾಗಿ ಯಾರಾದರೂ ಭೇದಭಾವಕ್ಕೊಳಗಾದಾಗ, ಅವರ ಪರವಾಗಿ ಸಬ್‌ರಂಗ್ ಸಕ್ರಿಯ ಚಟುವಟಿಕೆಯಿಂದ ತನ್ನನ್ನು ಗುರುತಿಸಿಕೊಂಡಿದೆ.

ಲೈಂಗಿಕತೆ ಅಭಿವೃದ್ಧಿ ಹಾಗೂ ಮಾನವ ಹಕ್ಕಿನ ವಿಷಯವಾಗಿ ಕಾರ್ಯರೂಪಕ್ಕೆ ಬರಬೇಕೆಂದು ಬಯಸುವ ಸಬ್‌ರಂಗ್ ಅದಕ್ಕಾಗಿ ತುಳಿತಕ್ಕೊಳಗಾದ ಎಲ್ಲಾ ಗುಂಪುಗಳನ್ನು ಸಂಯೋಜಿಸುವ ಕೆಲಸ ಮಾಡುತ್ತಿದೆ. ಸಾಮಾಜಿಕ ಚಳುವಳಿಗೆ ಬೆಂಬಲಿಸಬೇಕು ಹಾಗೂ ಇತರೆ ಗುಂಪುಗಳ ಸಹಾಯವಿಲ್ಲದೆ ನಾವು ಗುರಿ ಮುಟ್ಟಲಾರವೆಂದು ಇದು ನಂಬುತ್ತದೆ. ಇಂಗ್ಲೀಷ್‌ನ ಹಿನ್ನೆಲೆಯಿಲ್ಲದ ಜನರನ್ನು ಮುಟ್ಟಲು ಇದು ಹೆಣಗಾಡುತ್ತಿದೆ ಹಾಗೂ ಇವರು ಸಮಾಜದ ಕೆಳಸ್ತರದಲ್ಲಿರುವುದರಿಂದ ದ್ವಿಗುಣ ನಷ್ಟಕ್ಕೊಳಗಾಗುತ್ತಾರೆಂದು ತಿಳಿಯುತ್ತದೆ.

ಬೇರೆ ಯಾವುದೇ ಲೆಸ್‌ಬೈಗೇ ಬಗ್ಗೆ ಕೆಲಸ ಮಾಡುತ್ತಿರುವ ಯಾವುದೇ ಗುಂಪಿಗಿಂತ ಹೆಚ್ಚು ರಕ್ಷಣೆ, ಸುರಕ್ಷತೆ, ಸೌಲಭ್ಯವನ್ನು ಸಬ್‌ರಂಗ್‌ನಲ್ಲಿ ಪಡೆದೆ. ಇಲ್ಲಿ ಗೇ ಪುರುಷರಿಂದ ಲೆಸ್‌ಬಿಯನ್ ಬೈ ಸೆಕ್ಷುಯಲ್ ತುಳಿತಕ್ಕೆ ಒಳಗಾಗಿ ಇರುವುದಷ್ಟೇ ಅಲ್ಲದೆ ಲೆಸ್‌ಬೈಗೇನ ಪೋಷಕರು ಗಂಡ ಅಥವಾ ಹೆಂಡತಿ, ಮಕ್ಕಳು, ಸ್ನೇಹಿತರು, ಸಹ ಕೆಲಸಗಾರರ ಬಗ್ಗೆ ಕೂಡ ಚಿಂತಿಸಲಾಗುವುದು.

ಬಹಳ ಜನರು ಲೆಸ್‌ಬೈಗೇಗಳು ಭಾರತದಲ್ಲಿ ಇರುವುದನ್ನು ನಿರಾಕರಿಸುವರಲ್ಲದೆ ಇದು ವಿದೇಶೀ ಹಾಗೂ ಶ್ರೀಮಂತ ವರ್ಗದ ಸಂಗತಿ ಎಂದು ತಳ್ಳಿಹಾಕುತ್ತಾರೆ. ಇನ್ನೂ ಕೆಲವರು ಬಡ ಭಾರತ ದೇಶಕ್ಕೆ ವೈಯಕ್ತಿಕ ವಿಚಾರವಾದ ಲೈಂಗಿಕತೆಯ ದೃಢೀಕರಣಕ್ಕೆ ಗಮನ ಕೊಡಲು ಸಾಧ್ಯವೇ ಎನ್ನುತ್ತಾರೆ. ಮತ್ತಷ್ಟು ಜನ ಇದು ವಾಸಿ ಮಾಡಬೇಕಾದ ಕಾಯಿಲೆ, ಅಸಹಜತೆ ಸರಿಪಡಿಸಬೇಕು,

ಅಪರಾಧವಾದುದರಿಂದ ಶಿಕ್ಷಿಸಬೇಕೆಂಬ ಹಣೆ ಪಟ್ಟಿ ಹಚ್ಚುತ್ತಾರೆ. ನಿರಾಕರಣೆ ಹಾಗೂ ಗೌಪ್ಯತೆಯ ನಿರ್ಬಂಧದಿಂದಾಗಿ ಲೆಸ್‌ಬೈಗೇಗಳನ್ನು ದೂಷಣೆಗೆ ಭಾವನಾತ್ಮಕವಾಗಿ ಹಾಗೂ ಸಾಮಾಜಿಕವಾಗಿ ದೂರವಿರಿಸುವಿಕೆ, ಮಾನಸಿಕ ಪೆಟ್ಟಿನ ಮಧ್ಯೆ ಅನೇಕ ಲೆಸ್‌ಬೈಗೇಯ ದಿನನಿತ್ಯದ ಜೀವನ ಸಾಗಿಸುವಂತಾಗಿದೆ. ಇಂತಹ ನಿರಾಸಕ್ತ ವಾತಾವರಣ ಸ್ವಂತದರ ಅಂಗೀಕಾರಕ್ಕಾಗಲಿ, ಸ್ವಂತದರ ಬಗೆಗಿನ ಯೋಚನೆಗಾಗಲಿ ಗುರಿಪಡಿಸದೆ ನಿರುತ್ಸಾಹ ತುಂಬುವುದಲ್ಲದೆ ಕೆಲವೊಮ್ಮೆ ಆತ್ಮಹತ್ಯೆಗೂ ದಾರಿ ಮಾಡಿಕೊಡುತ್ತದೆ.

ಲೈಂಗಿಕತೆಯನ್ನು ಭಾರತದ ಮಾನವ ಹಕ್ಕುಗಳ ಅಜೆಂಡಾದಿಂದ ಅಪ್ರಸ್ತುತ ಹಾಗೂ ಉಳ್ಳವರ ವಿಚಾರವೆಂದು ಮಾಮೂಲಿ ಕಾರ್ಯಾಚರಣೆಯಿಂದ ತೆಗೆದುಹಾಕಲಾಗಿದೆ. ಸಾಮಾಜಿಕ ವ್ಯವಸ್ಥೆ ಹಾಗೂ ಹಳೆಯ ಕಾನೂನನ್ನು ತುಳಿತಕ್ಕೊಳಗಾದ ಲೆಸ್‌ಬೈಗೇ ಜನರ ಮೇಲೆ ಬಳಸಲಾಗುತ್ತಿದೆ. (ಇಂಡಿಯನ್ ಪೆನಲ್ ಕೋಡ್‌ನ 377 ವಿಧಿ ಪುರುಷ ಸಲಿಂಗ ರತಿ ಹಾಗೂ ಪ್ರಾಣಿಗಳೊಂದಿಗೆ ಮನುಷ್ಯನ ಅನೈಸರ್ಗಿಕ ರತಿಯನ್ನು ಅಪರಾಧವೆಂದು ಪರಿಗಣಿಸುತ್ತದೆ. ಇದನ್ನೇ ಹಣ ಕೀಳುವ ಕಾರಣಕ್ಕಾಗಿ ಪೊಲೀಸರು ಲೆಸ್‌ಬೈಗೇ ಮೇಲೆ ಬಳಸುತ್ತಿದ್ದಾರೆ). ಲೈಂಗಿಕತೆ ಬಗೆಗಿನ ಮೌನದ ಸಂಸ್ಕೃತಿ, ಗೋಚರಿಸದಂತೆ ಇರಬೇಕಾದ ಅನಿವಾರ್ಯ ಒತ್ತಾಯದ ಮೌನವಾಗಿಸಿದೆ. ಈ ಪ್ರಕ್ರಿಯೆಯಿಂದ ಹೆಚ್ಚು ತೊಂದರೆಗೊಳಗಾಗುವವರು ಯೌವನಾವಸ್ಥೆಯಲ್ಲಿರುವ ಲೆಸ್‌ಬೈಗೇ ಜನರು.

ಸಮಾಜ ಲೆಸ್‌ಬೈಗೇಗಳನ್ನು ಒಪ್ಪಿಕೊಳ್ಳದಿರುವುದರಿಂದ ಇತರರು ಅಂದರೆ ಅವರ ಹೆಂಡತಿ/ಗಂಡ, ಮಕ್ಕಳು ಹಾಗೂ ಉಳಿದವರು ತೊಂದರೆ ಅನುಭವಿಸುತ್ತಾರೆ. ಲೈಂಗಿಕತೆ, ಸಲೈಂಗಿಕತೆ, ದ್ವಿಲೈಂಗಿಕತೆಯನ್ನು ಹಕ್ಕು ಎಂದು ಸಾರ್ವಜನಿಕವಾಗಿ ವ್ಯಾಖ್ಯಾನಕ್ಕೆ ತರುವುದರಿಂದ ಲೆಸ್‌ಬೈಗೇ ಜನರಿಗೆ ಅವರಂಥ ಇತರರನ್ನು ಸಂಧಿಸಲು ಸಹಾಯಕವಾಗುತ್ತದೆ. ತಮ್ಮ ಲೈಂಗಿಕತೆಯಿಂದಾಗಿ ತುಳಿತಕ್ಕೆ ಒಳಗಾದುದರ ಬಗ್ಗೆ ಅರಿಯಲು ನೆರವಾಗುತ್ತದೆ. ಅಷ್ಟೇ ಅಲ್ಲದೆ ಇಂತಹ ದುರಾಗ್ರಹ, ಅಸಹನೆಯ ವಿರುದ್ಧ ಧ್ವನಿ ಎತ್ತಲು ಸಹಕಾರಿಯಾಗುತ್ತದೆ. ನಿಮ್ಮ ಲೈಂಗಿಕತೆಯ ಬಗ್ಗೆ ಹೊರಬಂದು ಸಾರ್ವಜನಿಕವಾಗಿ ಪ್ರತಿಪಾದಿಸಿರೆಂದು ನಾನು ಅನೇಕರಿಗೆ ಧೈರ್ಯ ತುಂಬ ಬಯಸುತ್ತೇನೆ. (ಪ್ರಥಮ ಬಾರಿಗೆ ನಾನು ಹೇಗೆ ಈ ಲೇಖನದ ಮೂಲಕ ಮಾಡುತ್ತಿದ್ದೇನೋ ಹಾಗೆ). ಒಮ್ಮೆ ತಮ್ಮ ಲೈಂಗಿಕತೆಯ ಬಗ್ಗೆ ನೆಮ್ಮದಿ ಹಾಗೂ ನಿಖರ ವಿಚಾರ ಬಂದರೆ ಲೆಸ್‌ಬೈಗೇ ಗಳಿಗೆ ಪ್ರಪಂಚವನ್ನು ಎದುರಿಸುವುದು ಸುಲಭವಾಗುತ್ತದೆ. ಒಮ್ಮೆ ಲೆಸ್‌ಬೈಗೇ ಗಳಿಗೆ ಅವರ ಪರಿಸ್ಥಿತಿಯ ಅರಿವಾದರೆ ಅವರು ತಮ್ಮ ಸ್ಥಿತಿಗೆ ಮುಖ್ಯ ಚಾಲನೆ/ಬದಲಾವಣೆ ತರುತ್ತಾರೆ. ಅಮೇರಿಕಾದ ಕಪ್ಪು ಗೇ ಒಬ್ಬರ ನುಡಿಯೊಂದಿಗೆ ಈ ಲೇಖನ ಮುಕ್ತಾಯಗೊಳಿಸಲು ಬಯಸುತ್ತೇನೆ.

The Victim who is able to articulate the situation of the victim has ceased to be a victim; he or she has become a threat.

ಬರೆದವರು : ಎಲವರ್ತಿ ಮನೋಹರ್
ಕೃಪೆ : ವಾಯ್ಸಸ್
ಕನ್ನಡಕ್ಕೆ : ಶಾರದ ಬಿ. ಎನ್.

## ತಂದರು ಅವರು ಮನೆಗೆ ಆಕೆಯ ಸತ್ತ ಶೂರ ಸೈನಿಕನನ್ನ

ತಂದರು ಅವರು ಮನೆಗೆ ಆಕೆಯ ಸತ್ತ ಶೂರ ಸೈನಿಕನನ್ನ
ಅಳಲಿಲ್ಲ, ಪ್ರಜ್ಞಾಹೀನಳಾಗಲಿಲ್ಲಾಕೆ.
ನಿರುಕಿಸಿದ ಸೇವಕಿಯರು ನುಡಿದರಿಂತು
ಅಳಬೇಕು ಅವಳು, ಸಾಯುತ್ತಾಳಾಕೆ ಇಲ್ಲವಾದರೆ.

ನಂತರ ಹೊಗಳಿದರು ಆತ ನಿಂತು - 'ಮೃದು, ನಿಧಾನದ
ಆತ ಯೋಗ್ಯನಾಗಿದ್ದ ಪ್ರೀತಿಗೆ
ನಿಜವಾದ ಮಿತ್ರ, ಗೌರವಾನ್ವಿತ ಶತ್ರು'
ಆದಾಗ್ಯೂ ನುಡಿಯಲಿಲ್ಲ, ಮಿಸುಕಾಡಲಿಲ್ಲಾಕೆ

ಅಲ್ಲಿಂದೆದ್ದಳು ಸೇವಕಿಯೋರ್ವಳು
ಸರಿದಳು ಮಲಗಿದ ಶೂರನತ್ತ
ಓರೆ ಮಾಡಿದಳಾತನ ಮುಖದ ಬಟ್ಟೆಯ
ಆದಾಗ್ಯೂ ಕದಲಲಿಲ್ಲ, ಅಳಲಿಲ್ಲಾಕೆ.

ತೊಂಭತ್ತರ ಆಯಾ ನಿಂತಳು ಎದ್ದು
ಆತನ ಮಗುವಿನಿಟ್ಟಳು ಆಕೆಯ ಉಡಿಯಲ್ಲಿ
ಬೇಸಿಗೆಯ ಬಿರುಗಾಳಿಯಂತೆ ಕೋಡಿಯೊಡೆಯಿತಾಕೆಯ
ಕಣ್ಣೀರು
'ಮುದ್ದು ಮಗುವೇ ಬದುಕುತ್ತೇನೆ ನಿನಗಾಗಿ'

ಆಲ್‌ಫ್ರೆಡ್ ಟೆನಿಸನ್
(ಅನುವಾದ)

# ಅವರನ್ನು ಜೀವಂತವಾಗಿ ಮನೆಗೆ ಕರೆದುತನ್ನಿ

ನನ್ನ ಮಧ್ಯಾನದ ಊಟ ತಯಾರಾಗಿ ಮೇಜಿನ ಮೇಲಿದೆ. ನೆನ್ನೆ ರಾತ್ರಿ ಮಾಡಿದ ರೋಹು ಮೀನು ಮತ್ತು ಅನ್ನ. ಸೈನ್ಯದಲ್ಲಿರುವ ನನ್ನ ಸೋದರ ಸಂಬಂಧಿಯ ನೆನಪಾಗುತ್ತಿದೆ. ಅವನ ಸಂಪರ್ಕವಿಲ್ಲದೆ ಎಷ್ಟೋ ಸಮಯವಾಯಿತು.

ಆಗವನು ಸಣ್ಣ ಹುಡುಗ. ಆಗಷ್ಟೇ ಶಾಲೆಗೆ ಹೋಗಲು ಪ್ರಾರಂಭಿಸಿದ್ದ. ಅವನು ಊಟ ಮಾಡುವಾಗ ಎಲ್ಲರೂ ಅವನನ್ನು ಬಿಟ್ಟ ಕಣ್ಣುಗಳಿಂದ ನೋಡುತ್ತಿದ್ದರು. ಅವನದು ಕೊನೆಯಿಲ್ಲದ ಹಸಿವೆ, ಕರುಳು ಬಿರಿಯುವಷ್ಟು ತಿನ್ನುತ್ತಿದ್ದ. ಯಾರಾದರು ಏನನ್ನಾದರೂ ತಿನ್ನುತ್ತಿದ್ದರೆ ಕಣ್ಣಗಲಿಸಿಕೊಂಡು, ಜೊಲ್ಲು ಸುರಿಸಿಕೊಂಡು ನೋಡುತ್ತಿದ್ದ. ಅವನ ಅಮ್ಮ ಅವನ ಕಿವಿ ಹಿಂಡಿ ಹೊಟ್ಟೆ ಬಾಕ ಬೇರೆಯವರಿಗೆ ತಿನ್ನಲು ಬಿಡುವುದಿಲ್ಲ ಎಂದು ಬೈಯ್ದು ಗಿಡಗಳಿಗೆ ನೀರು ಹಾಕು ಇಲ್ಲ ಓದಿಕೊ ಎಂದು ಹೊರಗಟ್ಟುತ್ತಿದ್ದಳು. ಅವನು ಅಳುತ್ತಾ ಹೋಗುತ್ತಿದ್ದ.

ನಮ್ಮದು 15 ಜನರಿದ್ದ ಅವಿಭಕ್ತ ಕುಟುಂಬ. ದೂರದ ನಗರದಲ್ಲಿ ಕೆಲಸ ಮಾಡುತ್ತಿದ್ದ ನನ್ನ ಅಪ್ಪನನ್ನು ಬಿಟ್ಟರೆ ಇನ್ನೆಲ್ಲರು ಹಳ್ಳಿಯಲ್ಲೇ ಇದ್ದೆವು. ನನ್ನ ಅಪ್ಪನೊಬ್ಬನೆ ಇಡೀ ಕುಟುಂಬಕ್ಕೆ ದುಡಿದ ಸಂಬಳ ತರುತ್ತಿದ್ದವನು. ಯಾವಾಗಲೂ ಹೊಟ್ಟೆ ತುಂಬಾ ಉಣ್ಣಲು ಇರುತ್ತಿರಲಿಲ್ಲ. ನಾವು ಯಾವತ್ತು ನಮ್ಮ ಸೋದರ ಸಂಬಂಧಿ ಬಾದಲ್ ಜೊತೆಯಲ್ಲಿ ಒಂದೆ ತಟ್ಟೆಯಲ್ಲಿ ಉಣ್ಣಲು ಕೂರುತ್ತಿರಲಿಲ್ಲ. ಕೂತರೆ ಎಲ್ಲವನ್ನು ಅವನೇ ತಿಂದುಬಿಡುತ್ತಿದ್ದ.

ನಾವೆಲ್ಲರೂ ಒಟ್ಟಿಗೆ ಬೆಳೆದೆವು. ನನ್ನ ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸುವವರೆಗೂ ಎಲ್ಲರೂ ಒಟ್ಟಿಗೆ ಬಡತನವನ್ನು ಹಂಚಿಕೊಂಡು ಬೆಳೆದೆವು. ನನಗೆ ರಾಷ್ಟ್ರೀಯ ವಿದ್ಯಾರ್ಥಿ ವೇತನ ದೊರಕಿತು. ಆಗ ನನ್ನ ತಂದೆ ನನ್ನಲ್ಲಿ ಭರವಸೆಯ ಕಿರಣವನ್ನು ಕಾಣಲಾರಂಭಿಸಿದರು. ಮುಂದಿನ ವಿದ್ಯಾಭ್ಯಾಸವನ್ನು ನಗರದಲ್ಲಿ ಮಾಡಬೇಕೆಂದು ನಮ್ಮನ್ನು ನಗರಕ್ಕೆ ಕರೆತಂದರು. ಆಗ ನಾವು ನಮ್ಮ ಚಿಕ್ಕಪ್ಪ, ದೊಡ್ಡಪ್ಪ ಸೋದರ ಸಂಬಂಧಿಗಳನ್ನು ಹಳ್ಳಿಯಲ್ಲಿ ಬಿಟ್ಟು ನಗರಕ್ಕೆ ಬಂದೆವು. ನನ್ನ ಹಿರಿಯ ಸೋದರ ಸಂಬಂಧಿಗೆ ಶಾಲೆಯಲ್ಲಿ ಉಪಾಧ್ಯಾಯರಾಗಿ ಕೆಲಸ ಸಿಕ್ಕಿತ್ತು. ದೊಡ್ಡಪ್ಪ ಇದ್ದ ತುಂಡು ಗದ್ದೆಯನ್ನು ನೋಡಿಕೊಳ್ಳುತ್ತಿದ್ದರು. ಚಿಕ್ಕಪ್ಪ, ಹಾಗು ಇತರ ಸೋದರ ಸಂಬಂಧಿಗಳು ಹೊಲದಲ್ಲಿ ಕೆಲಸ ಮಾಡುತ್ತಿದ್ದರು, ಪುಟ್ಟ ಹಿತ್ತಲಿನಲ್ಲಿ ತರಕಾರಿ ಬೆಳೆಯುತ್ತಿದ್ದರು. ಬೆಳೆದದ್ದು ದೊಡ್ಡ ಕುಟುಂಬಕ್ಕೆ ಸಾಕಾಗುತ್ತಿರಲಿಲ್ಲ. ನನ್ನ ಅಣ್ಣಂದಿರು ಮೀನು ಹಿಡಿಯುತ್ತಿದ್ದರು. ಚಿಕ್ಕಮ್ಮ ಮಳೆಗಾಲದಲ್ಲಿ ಏಡಿ ಹಿಡಿಯಲು ಬಲೆ ಹಾಕುತ್ತಿದ್ದಳು. ನಗರದಲ್ಲಿ ನಮ್ಮ ಸಂಸಾರವನ್ನು ಸಾಗಿಸಬೇಕಾಗಿದ್ದರಿಂದ ಮೊದಲಿನಂತೆ ಅಪ್ಪನಿಗೆ ಹಳ್ಳಿಗೆ ಹಣ ಕಳಿಸಲು ಸಾಧ್ಯವಾಗುತ್ತಿರಲಿಲ್ಲ. ವರ್ಷಕ್ಕೊಮ್ಮೆ ಇಡೀ ಕುಟುಂಬಕ್ಕೆ ಬಟ್ಟೆಯನ್ನು ಕೊಡಿಸುತ್ತಿದ್ದರು.

ನಾವು ಹಳ್ಳಿಗೆ ಹೋದಾಗ ಇಲ್ಲಿ ಹಳ್ಳಿಯಿಂದ ನಮ್ಮಲ್ಲಿಗೆ ಯಾರಾದರೂ ಬಂದರೆ ಎಷ್ಟೋ ವಿಷಯ ಕುರಿತು ಮಾತನಾಡುತ್ತಿದ್ದೆವು. ನಮ್ಮ ಗದ್ದೆ, ತರಕಾರಿ, ಶಾಲೆ, ಪರೀಕ್ಷೆಯಲ್ಲಿ ಪಡೆದ ಅಂಕಗಳು... ಅನೇಕ ವಿಷಯಗಳ ಕುರಿತು ಮಾತನಾಡುತ್ತಿದ್ದೆವು. ಆದರೆ ಬಾದಲ್ ಬಗ್ಗೆ ನಾವು ಕೇಳುತ್ತಿದ್ದುದು ಒಂದೇ ಕಥೆ - ಅವನೀಗ ಕುದುರೆಯಂತೆ ತಿನ್ನುತ್ತಾನೆಂದು. ಅವನು ಮಾಡುತ್ತಿದ್ದ ಊಟ 3-4 ಜನರ ಊಟಕ್ಕೆ ಸಮ! ಯಾರಿಗೂ ಅವನ ಹೊಟ್ಟೆ ತುಂಬಿಸಲು ಸಾಧ್ಯವಿಲ್ಲವೆಂದು ಎಲ್ಲರೂ ನಗುತ್ತಿದ್ದರು. ಅವನೂ ಸೇರಿಕೊಂಡು ನಗುತ್ತಿದ್ದ. ಆರೋಗ್ಯದಿಂದ ತುಂಬಿದ್ದ ಬಾದಲ್ ಒಂದಿಷ್ಟು ಸುಸ್ತಾಗದೆ ಗಂಟೆಗಟ್ಟಲೆ ಹೊಲದಲ್ಲಿ ದುಡಿಯುತ್ತಿದ್ದ. ಸಣ್ಣ ಹುಡುಗನಿದ್ದಾಗಿಂದಲೂ ಯಾವತ್ತೂ ಅವನು ಊಟದ ಬಗ್ಗೆ ಕೊಂಕು ತೆಗೆದವನಲ್ಲ. ಅವನ ಈ ಗುಣವನ್ನು ಎಲ್ಲರೂ ಇಷ್ಟಪಡುತ್ತಿದ್ದರು.

ಓದಿನಲ್ಲಿ ಬಾದಲ್ ಯಾವಾಗಲೂ ಹಿಂದೆ. ಅವನ ವಿದ್ಯಾಭ್ಯಾಸದ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಅವನೂ ಸಹ ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಒಂದು ಬಾರಿ ಫೇಲಾಗಿ ಮತ್ತೊಮ್ಮೆ ಪರೀಕ್ಷೆ ತೆಗೆದುಕೊಂಡು ಪಾಸಾಗಿದ್ದ. ಪ್ರಗತಿ ಮತ್ತು ತಾಂತ್ರಿಕತೆಯ ಜಗತ್ತಿನಲ್ಲಿ, ಅದೊಂದೇ ಅವನ ಅರ್ಹತೆಯಾಯ್ತು. ಈಗವನಿಗೆ 18 ವರ್ಷ. ಎತ್ತರಕ್ಕೆ, ದೃಢಕಾಯನಾಗಿ ಬೆಳೆದಿದ್ದಾನೆ. ಹೊಟ್ಟೆ ಬಟ್ಟೆಗೆ ಅವನೇ ಹೊಂದಿಸಿಕೊಳ್ಳಬೇಕು.

ಮುಂದಿನ ಓದಿಗಾಗಿ ಐ.ಐ.ಟಿ. (ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಬಾಂಬೆ)ಯಲ್ಲಿ ನನ್ನನ್ನು ಆಯ್ಕೆ ಮಾಡಿಕೊಂಡರು. ಬಾಂಬೆಗೆ ಹೋಗುವ ಮೊದಲು ನನ್ನ ಹಳ್ಳಿಗೆ ಹೋದೆ. ಅಲ್ಲಿಗೆ ಹೋದ ಮೇಲೆ, ಬಾದಲ್ ಫ್ಯಾಕ್ಟ್ರಿಯೊಂದರಲ್ಲಿ ಕೆಲಸ ಮಾಡಲು ಬಾಂಬೆಗೆ ಹೋಗಿದ್ದಾನೆಂದು ತಿಳಿಯಿತು. ಇಬ್ಬರೂ ಒಂದೇ ಕಡೆಯಲ್ಲಿರುತ್ತೇವೆಂದು ಖುಷಿಯಾಗಿ

ಅವನ ವಿಳಾಸ ಕೇಳಿದೆ. ಅವನ ವಿಳಾಸ ಯಾರಿಗೂ ಗೊತ್ತಿರಲಿಲ್ಲ. ಕೆಲಸಕ್ಕಾಗಿ ಬಾದಲ್ ತುಂಬಾ ಅಲೆದಾಡುತ್ತಿದ್ದನಂತೆ. ಎಲ್ಲಿ ಹೋದರೂ ನಿರಾಸೆಯಿಂದ ಹಿಂತಿರುಗುತ್ತಿದ್ದನಂತೆ. ಹತ್ತಿರದ ಹಳ್ಳಿಯಲ್ಲಿದ್ದ ಕಂಟ್ರಾಕ್ಟರ್ ಒಬ್ಬ ಬಾಂಬೆಯಲ್ಲಿ ಕೆಲಸಕ್ಕೆಂದು ಹುಡುಗರನ್ನು ಹುಡುಕುತ್ತಿರುವನೆಂದು ತಿಳಿದ ಬಾದಲ್ ಅವನನ್ನು ನೋಡಲು ಹೋಗಿದ್ದನಂತೆ. ಬಾದಲ್ ಅಲ್ಲದೆ ಇನ್ನು 10-12 ಹುಡುಗರನ್ನು ತಿಂಗಳಿಗೆ 1,000/- ರೂ. ಸಂಬಳ ಕೊಡಿಸುವುದಾಗಿ ಹೇಳಿ ಕರೆದುಕೊಂಡು ಹೋದನಂತೆ. ಉಳಿದುಕೊಳ್ಳಲು ಸರಿಯಾದ ವ್ಯವಸ್ಥೆಯಾದ ನಂತರ ವಿಳಾಸ ನೀಡುವುದಾಗಿ, ಕಂಟ್ರಾಕ್ಟರ್ ಹೇಳಿದ್ದನಂತೆ.

ಕೊನೆಯಿಲ್ಲದ ಬಡತನ, ಅರೆ ಹೊಟ್ಟೆ ಅವನನ್ನು ಗೊತ್ತು ಗುರಿಯಿಲ್ಲದ ಊರಿಗೆ ದೂಡಿತ್ತು. ನಾನು ನನ್ನ ವಿಳಾಸವನ್ನು ಕೊಟ್ಟು, ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಬಾದಲ್‌ಗೆ ತಿಳಿಸಿ ಎಂದು ಹೇಳಿದೆ. ಹಾಗೆಯೇ ಅವನ ವಿಳಾಸ ಸಿಕ್ಕ ಕೂಡಲೆ ನನಗೆ ಕಳುಹಿಸಬೇಕೆಂದು ಹೇಳಿ ಹೊರಟು ಬಂದೆ. ಒಂದೆರಡು ತಿಂಗಳ ನಂತರ ಬಾದಲ್ ಕುರಿತು ಬರೆದ ಪತ್ರ ನನಗೆ ಬಂತು. ಅರೆ ಸತ್ತ ಹೆಣವಾಗಿ ಹಿಂತಿರುಗಿ ಬಂದಿದ್ದಾನೆಂದು ಓದಿ ದುಃಖವಾಯಿತು. ನನ್ನ ಪರೀಕ್ಷೆ ಮುಗಿಸಿ ಹಳ್ಳಿಗೆ ಹೋದಾಗ ನಡೆದುದೇನೆಂದು ತಿಳಿಯಿತು.

ಕೆಲಸಕ್ಕೆಂದು ಕರೆದುಕೊಂಡು ಹೋದ ಹುಡುಗರೆಲ್ಲರನ್ನು ಸ್ಲಂನಲ್ಲಿದ್ದ ಪುಟ್ಟ ಕೋಣೆಯಲ್ಲಿಟ್ಟಿದ್ದರಂತೆ. ಫ್ಯಾಕ್ಟರಿಯಲ್ಲಿ ಬೆಳಗಿನಿಂದ ರಾತ್ರಿಯವರೆಗೂ, ಕಬ್ಬಿಣದ ತೊಲೆಗಳು, ಕಬ್ಬಿಣದ ಪ್ಲೇಟುಗಳನ್ನು ಎತ್ತುವ ಕೆಲಸ. ಕೆಲವೊಮ್ಮೆ ಕಟ್ಟಡ ಕಟ್ಟುವ ಸ್ಥಳದಲ್ಲಿ ಕೆಲಸ. ಎರಡೂವರೆ ತಿಂಗಳ ಕಾಲ ಕೆಲಸ ಮಾಡಿಸಿಕೊಂಡಿದ್ದರು. ತಿಂಗಳ ಕೊನೆಯಲ್ಲಿ ಅರ್ಧ ಸಂಬಳವನ್ನಷ್ಟೇ ಕಂಟ್ರಾಕ್ಟರ್ ಅವರಿಗೆ ಕೊಟ್ಟನಂತೆ. ನಡುವೆಯೇ ಬಿಟ್ಟು ಓಡಿ ಹೋಗಿಬಿಡುವರೆಂಬ ಕಾರಣಕ್ಕೆ ಅರ್ಧ ಸಂಬಳ ನೀಡಿರುವುದೆಂದು ತಿಳಿಸಿದನಂತೆ. ೩ನೇ ತಿಂಗಳು ಕಂಟ್ರಾಕ್ಟರ್‌ನ ಪತ್ತೆಯೇ ಇಲ್ಲ. ಅಲ್ಲಿನ ಮ್ಯಾನೇಜರ್‌ನನ್ನು ಕೇಳಿದಾಗ ಸಂಬಳವನ್ನಾಗಲೇ ಕಂಟ್ರಾಕ್ಟರ್‌ಗೆ ಕೊಟ್ಟಿರುವುದಾಗಿ ಹೇಳಿದನಂತೆ. ಹುಡುಗರೆಲ್ಲ ಗಾಬರಿಗೊಂಡರು. ಕಾಣದ ಊರು, ತಮ್ಮ ಕಷ್ಟ ಹೇಳಿಕೊಳ್ಳಲು ಭಾಷೆಯೂ ಬರದು. ಹಿಂತಿರುಗಿ ಹೋಗಲು, ಟಿಕೇಟ್ ಕೊಳ್ಳುವಷ್ಟು ಹಣವೂ ಕೈಲಿಲ್ಲ. ಮನೆ ಇರುವುದು 2,000 ಕಿ.ಮೀ. ಆಚೆ.

ಹಣವಿಲ್ಲದೆ, ಟಿಕೇಟ್ ಇಲ್ಲದೆ ರೈಲು ಹತ್ತಿದರು. ಜೇಬಿನಲ್ಲಿದ್ದ ಕೊಂಚವೇ ಹಣವೂ ಖಾಲಿಯಾಯ್ತು. ತಿನ್ನಲೂ ಊಟವಿಲ್ಲ. ಟಿ.ಟಿ. ಕೈಯಲ್ಲಿ 3 ಬಾರಿ ಸಿಕ್ಕಿ ಬಿದ್ದು ಬೂಸವಲ್‌ನಲ್ಲಿ 2 ದಿನ ಜೈಲು, ಸಿಕಂದ್ರಾಬಾದ್‌ನಲ್ಲಿ 8 ದಿನ ಜೈಲು, ಬಾದಲ್ ಮನೆ ತಲುಪಿದಾಗ ಗುರುತೇ ಹಿಡಿಯದಂತಾಗಿದ್ದ. ಗುಳಿಬಿದ್ದ ಕಣ್ಣು, ಮೂಳೆ ಚಕ್ಕಳವಾಗಿದ್ದ ದೇಹ, ಮಾತೇ ಹೊರಡುತ್ತಿರಲಿಲ್ಲ. ಕಳೆದ ಮೂರು ದಿನಗಳಿಂದ ಏನೂ ತಿಂದಿಲ್ಲ, ತಿನ್ನಲು ಏನಾದರು ಬೇಕೆಂದು ಉಸುರಿದನಂತೆ.

ಸುತ್ತಲೂ ಎಲ್ಲೂ ಬಾದಲ್ ಕಾಣಿಸಲಿಲ್ಲ. ಕೇಳಿದಾಗ ಹತ್ತಿರದ ಹಳ್ಳಿಯಲ್ಲಿ ಟೈಲರಿಂಗ್ ಅಂಗಡಿ ತೆರೆದಿರುವನೆಂದು ಹೇಳಿದರು. ಕೆಲಸ ಹೆಚ್ಚಿದ್ದುದರಿಂದ ಮನೆಗೆ ಬರಲು ಸಮಯವಾಗುವುದಿಲ್ಲವೆಂದು ಹೇಳಿದರು. ಅವನನ್ನು ಹುಡುಕಿಕೊಂಡು ಹೋದೆ. ಮಣ್ಣಿನ ಗೋಡೆಯ, ಹುಲ್ಲಿಯ ಛಾವಣಿಯ ಅವನ ಅಂಗಡಿ ರಸ್ತೆ ಪಕ್ಕಕ್ಕಿತ್ತು. ಒಳಗೆ ಹೋದಾಗ ಅವನು ಮೆಶೀನ್ ತುಳಿಯುತ್ತಿದ್ದ ನನ್ನನ್ನು ನೋಡಿ ಸ್ವಾಗತಿಸಲು ಎದ್ದು ಬಂದ. ಅವನನ್ನು ನೋಡಿ ಸಂಕಟವಾಯಿತು. ಇನ್ನೂ ಚೇತರಿಸಿಕೊಳ್ಳುತ್ತಿದ್ದ ಅವನ ದೇಹವೇ ಎಲ್ಲ ಕತೆಯನ್ನು ಹೇಳುತ್ತಿತ್ತು. ಕೆಲಸ ಹೇಗಿದೆಯೆಂದು ಕೇಳಿದೆ. ಕೆಲಸವೇನೋ ಕೈ ತುಂಬಾ ಇದೆ. ಸುತ್ತಮುತ್ತಲೂ ಬೇರೆ ಟೈಲರ್‌ಗಳಿಲ್ಲ. ಆದರೆ ಇಡೀ ದಿನ ಕೆಲಸ ಮಾಡಿದರೂ ಹೆಚ್ಚಿನ ಹಣ ಸಿಗುವುದಿಲ್ಲ. ನೋಡೋಣ ಮುಂದೆ ವ್ಯಾಪಾರ ಕುದುರಬಹುದೆಂದು ಹೇಳಿದ. ನನ್ನ ಓದಿನ ಬಗ್ಗೆ ವಿಚಾರಿಸಿದ. ಈಗಲೂ ಹೊಟ್ಟೆಬಾಕನಂತೆ ತಿನ್ನುತ್ತೀಯಾ ಎಂದು ತಮಾಷೆ ಮಾಡಿದ. ಸುಮ್ಮನೆ ನಕ್ಕ. ಊಟಕ್ಕೆ ಮನೆಗೆ ಬಾ ಎಂದು ಕರೆದೆ. ಇಲ್ಲ ತುಂಬಾ ಕೆಲಸವಿದೆ. ಸಂಜೆಗೆ ಬರುವೆನೆಂದ. ನಾನು ಹೊರಟು ಬಂದೆ. ಬಿಕೋ ಎನ್ನುವ ಆ ಜಾಗದಲ್ಲಿ ಮೆಶಿನ್ ತುಳಿಯುವ ಸದ್ದು ಮಾತ್ರ ಕೇಳುತ್ತಿತ್ತು.

ಮತ್ತೆ ಒಂದು ವರುಷದ ನಂತರ ಅವನನ್ನು ಹಳ್ಳಿಯಲ್ಲಿ ಭೇಟಿಯಾದೆ. ಆರೋಗ್ಯವಂತನಾಗಿ ಕಂಡರೂ ಮೊದಲಿನಂತಾಗಿರಲಿಲ್ಲ. ಬಿಳುಚಿ ಹೋಗಿದ್ದ ಅವನ ಮುಖದಲ್ಲಿ ಮೊದಲಿದ್ದ ಉಲ್ಲಾಸವನ್ನು ಮತ್ತೆ ಕಾಣಲೇ ಇಲ್ಲ. ನಾನು ವಿಶ್ರಾಂತಿಯಿಲ್ಲದೆ, ಕಷ್ಟಪಟ್ಟು ದುಡಿಯಬೇಕು. ಜನ ತುಂಬಾ ಕಮ್ಮಿ ಹಣ ಕೊಡುತ್ತಾರೆ. ಮನೆಗೆ ಒಂದಿಡಿ ಕಾಸನ್ನು ನೀಡಲಾಗುತ್ತಿಲ್ಲ. ಜೀವನ ನಡೆಸುವುದೇ ಕಷ್ಟವಾಗಿದೆ ಎಂದು ಹೇಳಿದ. ಅವನು ತೊಟ್ಟ ಪ್ಯಾಂಟಿನ ಹಿಂಬದಿಗೆ ಹಾಕಿದ್ದ ತೇಪೆ ನನ್ನ ಕಣ್ಣಿಗೆ ಬಿತ್ತು.

ಅವನು ಸೈನ್ಯ ಸೇರಿದನೆಂದು ನಂತರ ತಿಳಿಯಿತು. ನಾನು ಅವನನ್ನು ನೋಡಿ ಮೂರು ವರ್ಷ ಮೇಲಾಯ್ತು. ನನ್ನ ಸೋದರ ರಸ್ತೆ ಅಪಘಾತದಲ್ಲಿ ಸತ್ತಾಗ ನೋಡಲು ಬಂದಿದ್ದಾಗ ಅವನನ್ನು ನೋಡಿದ್ದು. ಸುದ್ದಿ ತಿಳಿದು ಓಡೋಡಿ ಬಂದಿದ್ದ. ತನ್ನ ಕೆಲಸ

ಕುರಿತು ಹೇಳುವಾಗ ಅಸಂತೋಷ ವ್ಯಕ್ತಪಡಿಸಿದ. ಆರ್ಮಿ ಕ್ಯಾಂಪಿನಲ್ಲಿ ನಡೆಸುತ್ತಿದ್ದ ಜೀವನ ಅವನಿಗಿಷ್ಟವಿರಲಿಲ್ಲ. ನಿತ್ಯವೂ ಅವನೆದುರಿಸುತ್ತಿದ್ದ ಕಷ್ಟ, ಅವಮಾನ ಕುರಿತು ಜಿಗುಪ್ಸೆಯಿಂದ ಹೇಳಿದ. ಆದರೆ ಯುದ್ಧದಲ್ಲಿ ಕೊಲ್ಲುವುದರ ಬಗ್ಗೆ ಭಾವುಕನಾಗಿ, ಆವೇಶದಿಂದ ನುಡಿದ. ಪಾಕಿಸ್ತಾನದವರು ಆಕ್ರಮಣ ಮಾಡಿದರೆ ನಾವವರನ್ನು ಕೊಂದುಬಿಡುತ್ತೇವೆಂದು ಹೇಳಿದ. ನಾನವನನ್ನೂ ಕೇಳಿದೆ - ನಿನ್ನ ಮೇಲೆ ಆಕ್ರಮಣ ಮಾಡಲು ಬರುವ ಪಾಕಿಸ್ತಾನಿಗಳು ಯಾರು? ಅವರೂ ನಿನ್ನಂತೆಯೇ ಕೆಲಸ ಹುಡುಕಿಕೊಂಡು ಸೈನ್ಯ ಸೇರಿದವರಲ್ಲವೆ? ಊಟಕ್ಕಾಗಿ, ಮನೆಗೆ ಹಣ ಕಳುಹಿಸುವ ಸಲುವಾಗಿ ಸೇರಿದವರಲ್ಲವೆ? ಅವರು ತಾವೇ ತಾವಾಗಿ ಆಕ್ರಮಣ ಮಾಡಲು ಬರುತ್ತಾರೆಯೆ? ಅಥವಾ ನೀನು, ನೀನಾಗೇ ಅವರ ಮೇಲೆ ಆಕ್ರಮಣ ಮಾಡಲು ಹೋಗುತ್ತೀಯಾ? ಅವನು ಸುಮ್ಮನಿದ್ದ. ನಾನು ಮತ್ತೆ ಕೇಳಿದೆ, ನಿನ್ನ ಸೋದರ ಸತ್ತನೆಂದು ದುಃಖ ತಡೆಯದೆ ಕಾಶ್ಮೀರದಿಂದ ಕಟಕ್‌ಗೆ ಓಡಿ ಬಂದೆ. ಹಾಗೆಯೇ ಪಾಕಿಸ್ತಾನಿ ಯೋಧರಿಗೆ ಬೇರೆ ಹೃದಯವಿದೆಯೆ? ಅವನು ಆಶ್ಚರ್ಯದಿಂದ ನನ್ನನ್ನು ನೋಡಿದ. ಒಂದು ತಿಂಗಳ ಕಾಲ ಮನೆಯಲ್ಲಿದ್ದ ಅವನು ಹೊರಡುವ ಮುನ್ನ ಪೆನ್‌ಶನ್ ತೆಗೆದುಕೊಳ್ಳಲು ಅರ್ಹನಾಗುವವರೆಗೂ ಕೆಲಸ ಮಾಡಿ ನಂತರ ಕೆಲಸ ಬಿಡುವುದಾಗಿ, ಯಾರನ್ನು ಕೊಲ್ಲುವುದು ನನಗೆ ಇಷ್ಟವಿಲ್ಲವೆಂದು ಹೇಳಿದ.

ನನಗೀಗ ಅವನದೇ ನೆನಪು. ಒಮ್ಮೆ ಅರ್ಧ ಹೆಣವಾಗಿ ಹಿಂತಿರುಗಿ ಬಂದಿದ್ದ. ಈ ಸಲ ಏನಾಗುವುದೋ ಎಂದು ಹೆದರಿಕೆಯಾಗುತ್ತಿದೆ. ಯುದ್ಧ ಜಾರಿಯಲ್ಲಿದೆ. ನೂರಾರು ಜನ ಸಾಯುತ್ತಿದ್ದಾರೆ. ಅವರೆಲ್ಲರಲ್ಲೂ ನನಗೆ ಬಾದಲ್ ಕಾಣುತ್ತಿದ್ದಾನೆ. ಅವರೆಲ್ಲ ಸಾಯುತ್ತಿರುವುದು ಮನೆಯಲ್ಲಿ ಹೊಟ್ಟೆ ತುಂಬ ಉಣ್ಣಲು ಇಲ್ಲದುದಕ್ಕೆ. ಇದೆಂಥಾ ಜೀವನ? ನೀವೀಗ ನನ್ನನ್ನು ಕಾರ್ಗಿಲ್ ಹೆಸರಿನಲ್ಲಿ ಹಣ ಕೇಳುತ್ತಿದ್ದೀರಿ. ನಿತ್ಯದ ಜೀವನದಲ್ಲಿ ಅವರನ್ನು ಅವಮಾನಿಸುತ್ತೀರಿ, ಸಾರ್ವಜನಿಕವಾಗಿ ದೇಶಭಕ್ತರೆಂದು ಹೊಗಳುತ್ತೀರಿ. ಅವರನ್ನು ಕೊಂದು ಹಾರ ಹಾಕಿ ಹುತಾತ್ಮರೆಂದು ಕರೆಯುತ್ತೀರಿ. ಅವರನ್ನು ಬಳಸಿಕೊಂಡಿರಿ, ಬಳಸಿಕೊಳ್ಳುತ್ತೀರಿ, ಕಾರಣವೇನು? ಅವರು ಹುಟ್ಟು ದೇಶಭಕ್ತರೆಂದು, ಹುತಾತ್ಮರಾಗಲು ಇಷ್ಟ ಪಡುತ್ತಾರೆಂದು ಸುಳ್ಳು ಹೇಳುತ್ತೀರಿ, ನಿಲ್ಲಿಸಿ ಇದನ್ನು, ನನಗೆ ಸಹಿಸಿಕೊಳ್ಳಲಾಗುತ್ತಿಲ್ಲ. ಅವರೆಲ್ಲರನ್ನು ಮನೆಗೆ ಕರೆದು ತನ್ನಿ. ಜೀವಂತವಾಗಿ ಕರೆದು ತನ್ನಿ. ನನ್ನ ಮೇಜಿನ ಮೇಲೆ ನಿನ್ನೆ ರಾತ್ರಿ ಮಾಡಿದ ಅಡುಗೆ ಸಾಕಷ್ಟಿದೆ.

## ನಾಚಿಕೆಯಾಗಬೇಕು ಆತನ ನೆಲಕ್ಕೆ

ಆ ಕರಾಳ ರಾತ್ರಿಯಂದು ಮಾರ್ಟಿನ್ ಪ್ಯೊಯಿಷ್‌ಬಳಿ
ಏಕ ಸ್ಫೋಟಿಕ ಬಲಿಗೈದಿತಿಬ್ಬರ
ಜೊತೆಗೂಡಿ ಕುಸಿದರು ಏಕ ರಾಶಿಯಾಗಿ
ರುಂಡ, ಮುಂಡ ಬೇರ್ಪಟ್ಟು ಕುರಿಯಂತೆ -

ಆತ ಹದಿನೆಂಟರ ಹರೆಯದ ಪೇಲವ ವ್ಯಕ್ತಿ
ಸೊಣಕಲು, ನೀಲಿಕಣ್ಣಿನವ ಇವ ಅಧೈರ್ಯಶಾಲಿ
ರಣರಂಗಕ್ಕೆ ತಳ್ಳಲ್ಪಟ್ಟ ಹತ್ತು ವರುಷಗಳ ಮುಂಚೆಯೇ
ನಾಚಿಕೆಯಾಗಬೇಕು ಅವನ ನೆಲಕ್ಕೆ

ಮಗದೊಬ್ಬ ಬಂದಿದ್ದ ದೂರದ ನೆಲದಿಂದ
ಕುರುಚಲು ಗಡ್ಡ ಹಾಗೂ ರೋಮದ ಕೈಯವ
ಸಾವು, ಕರಾಳ ರಾತ್ರಿಯ ಬಲ್ಲವನವನು
ಮೆಕ್ಸಿಕೋ ಮತ್ತು ಎಕ್ಕಿಡಾರ್‌ನಲ್ಲಿ

ಆದಾಗ್ಯೂ ಈ ಕಟುಕ ತನ್ನ ಸಾವಿನಲ್ಲಿ
ನರಳಿದ್ದ ಮಗುವಿನಂತೆ 'ಅಮ್ಮಾ! ಅಮ್ಮಾ!
ಗಂಡಸಿನ ಬಟ್ಟೆಯೊಳಗಿದ್ದ ಬಡ ಮುಗ್ಧ
ಸತ್ತ ಶಪಿಸುತ್ತ ದೈವವನ್ನೂ ಕ್ರೂರವಾಗಿ

ಮುದುಕ ಸರ್ಜೆಂಟ್ ಸ್ಮಿತ್ ದಯಾಳು ಮನುಷ್ಯ
ಅಲ್ಲಲ್ಲಿಯೇ ಬರೆದ ಎರಡು ಪ್ರತಿಗಳನ್ನು
ಆತನ ರೂಢಿಗತ ಶವಸಂಸ್ಕಾರದ ಮಾತುಗಳನ್ನು
ಹರುಪಿಸಲು ಅವರಿಬ್ಬರ ಸ್ತ್ರೀ ಸಮುದಾಯವನ್ನು

ಆತ ಅಪ್ಪಿದ್ದು ವೀರ ಮರಣ, ನಾವು
ಆತನ 'ಎ' ವಿಭಾಗದ ಜೊತೆಯವರು
ಶೋಕಿಸುತ್ತೇವೆ ಆಳವಾಗಿ ಆತನ ಸಾವನ್ನು ಹಾಗೂ ನಾವು
ನಿಜವಾದ ಜೊತೆಗಾರರಿಂದ ವಂಚಿತರಾಗಿದ್ದೇವೆ.

'ರಾಬರ್ಟ್ ಗ್ರೀವ್ಸ್'
(ಅನುವಾದ)

# ನರ್ಮದಾದಂಥ ಯೋಜನೆಗಳಿಂದ ನಿಜ ಅಭಿವೃದ್ಧಿ ಸಾಧ್ಯವೇ?

■ ಮೇಧಾ ಪಾಟ್ಕರ್

ನರ್ಮದಾ ಕಣಿವೆಯಲ್ಲಿ ಹೋರಾಟ ಆರಂಭವಾಗಿ ಹನ್ನೆರಡು ವರ್ಷಗಳು ಕಳೆದವು. ಪ್ರಕೃತಿಯನ್ನು ಅವಲಂಬಿಸಿ ಬದುಕುತ್ತಿದ್ದ ಅಮಾಯಕ ಆದಿವಾಸಿಗಳಿಂದ ಆರಂಭವಾದ ಹೋರಾಟ ಕ್ರಮೇಣ ನಿಮಾಡ್‌ನ ಫಲವತ್ತಾದ ಮತ್ತು ಸಸ್ಯ ಶಾಮಲೆ ಕ್ಷೇತ್ರಕ್ಕೂ ಹಬ್ಬಿತು. ಹೊರಗಡೆಯ ಬೆಂಬಲಿಗರ ಒತ್ತಾಸೆ ಈ ಹೋರಾಟಕ್ಕೆ ಲಭ್ಯವಾಗಿತ್ತು, ಇಲ್ಲಿನ ಸಾಮಾನ್ಯ ಜನ ತಮ್ಮ ಸ್ವಂತ ಶಕ್ತಿಯ ಮೇಲೆಯೇ ಹೋರಾಟವನ್ನು ನಡೆಸುತ್ತಾ ಬಂದಿದ್ದಾರೆ. ಹೋರಾಟವನ್ನು ಗಟ್ಟಿಗೊಳಿಸಲು ಶ್ರಮಜೀವಿಗಳು ಹಾಗೂ ಶೋಷಿತರು ಒಗ್ಗಟ್ಟು ಸಾಧಿಸಿದ್ದಾರೆ. ನರ್ಮದಾ ಕಣಿವೆಯಲ್ಲಿ ಹಲವಾರು ಹಂತಗಳ ಹೋರಾಟಗಳು ನಡೆದಿವೆ. ಬಾಬಾ ಆಮ್ಟೆ, ಸಾಧನಾತಾಯಿ ಅಂಥ ಹಿರಿಯರು ಹೋರಾಟಕ್ಕೆ ಧುಮುಕಿ, ಹೋರಾಟಗಾರರ ನೈತಿಕತೆಯನ್ನು ಹೆಚ್ಚಿಸಿದ್ದಾರೆ. ನಾನು ನನ್ನನ್ನು ಕಣಿವೆಯವಳೆಂದೇ ಭಾವಿಸಿಕೊಂಡಿದ್ದೇನೆ ಮತ್ತು ನನ್ನ ಭಾಗವಹಿಸುವಿಕೆ ಇಲ್ಲಿ ಕಾರಣಮಾತ್ರ.

ನರ್ಮದಾಗೆ ಕಟ್ಟಲಾಗುತ್ತಿರುವ ಅಣೆಕಟ್ಟಿನ ಪ್ರಯೋಜನವೇನು? ಇದಕ್ಕೆ ತಗಲುವ ವೆಚ್ಚ ಎಷ್ಟು? ವೆಚ್ಚಕ್ಕೆ ತಕ್ಕ ರೀತಿಯ ಪ್ರಯೋಜನ ಆಗಲಿದೆಯೇ? ಆಗಲಿರುವ ಪರಿಸರನಾಶವನ್ನು ತುಂಬಿಕೊಳ್ಳುವುದು ಹೇಗೆ? ಅಣೆಕಟ್ಟಿನಿಂದ ನಿರ್ವಸಿತರಾಗುವವರಿಗೆ ಒದಗಿಸಲಿರುವ ಪುನರ್ವಸತಿ ಏನು?... ಮುಂತಾದ ಹಲವಾರು ಪ್ರಶ್ನೆಗಳಿಗೆ ಮನವರಿಕೆಯಾಗಬಲ್ಲ ಉತ್ತರಗಳು ಜನತೆಗೆ ಬೇಕಾಗಿವೆ ಎಂದು ಹೋರಾಟವು ಪ್ರಾರಂಭದಿಂದಲೂ ಆಗ್ರಹಪಡಿಸುತ್ತಾ ಬಂದಿದೆ. ಯಾವುದೇ ಮಾಹಿತಿಯನ್ನು ಪಡೆಯುವ ಹಕ್ಕು ಜನತೆಗೆ ಸಿಕ್ಕಬೇಕೆಂಬುದು ಹೋರಾಟದ ನಿಲವಾಗಿದೆ. 1985 ರಿಂದ 1987ರವರೆಗೆ ನಾವು ಇಂಥ ಹಲವಾರು ಪ್ರಶ್ನೆಗಳನ್ನು ಗ್ರಾಮಲೆಕ್ಕಿಗನಿಂದ ವಿಶ್ವಬ್ಯಾಂಕಿನವರೆಗೆ ಎಲ್ಲರನ್ನೂ ಕೇಳಿದೆವು; ಎಲ್ಲಿಂದಲೂ ನಮಗೆ ಉತ್ತರ ಸಿಕ್ಕಲಿಲ್ಲ. ಇಂಥ ಪ್ರಶ್ನೆಗಳಿಗೆ ಉತ್ತರ ಇಲ್ಲವೆಂದರೆ, ಅಣೆಕಟ್ಟೆಗೆ ನಮ್ಮ ಒಪ್ಪಿಗೆ ಇರುವುದಿಲ್ಲ. ವಿಂಧ್ಯ – ಸಾತ್ಪುಡಾ ವಲಯಗಳ ಆದಿವಾಸಿಗಳು ಮತ್ತು ನಿಮಾಡ್ ಜನತೆ ಅಣೆಕಟ್ಟೆಗೆ ತೀವ್ರ ವಿರೋಧ ವ್ಯಕ್ತಪಡಿಸಿದ್ದಾರೆ. ತಮ್ಮ ಒಗ್ಗಟ್ಟೇ ತಮ್ಮನ್ನು ರಕ್ಷಿಸುವ ಅಣೆಕಟ್ಟು ಎಂದು ಅವರು ಸ್ಪಷ್ಟಪಡಿಸಿದ್ದಾರೆ.

ಅಣೆಕಟ್ಟು ವಿರೋಧಿಸುವ ಚಿಂತನೆಯ ಹಿಂದೆ ಯಾವುದೇ ಮೂಢ ದರ್ಶನ, ವಿದೇಶಿ ಹಣ ಅಥವಾ ಕುರುಡು ವಿರೋಧ ಇಲ್ಲ. ಜನತೆಯ ಅನುಭವ ಹಾಗೂ ವ್ಯಕ್ತಿಗಳು ಬದುಕಿನಲ್ಲಿ ಕಲಿತಿರುವ ಪಾಠಗಳಿಂದ ಈ ವಿರೋಧ ಹುಟ್ಟಿದೆ. ಈ ಚಿಂತನೆಯ ಆಧಾರದಲ್ಲೇ ನಾವು ದೊಡ್ಡ ಅಣೆಕಟ್ಟುಗಳು, ಆದಿವಾಸಿಗಳ ಬದುಕು, ಅವರ ಜೀವನ ಮಾರ್ಗ, ಕೃಷಿ ಮತ್ತು ಕೈಗಾರಿಕೆಗಳು ನಡುವಣ ಭಾರಿ ಕಂದರ, ಹಳ್ಳಿ – ಪಟ್ಟಣಗಳ ನಡುವಣ ಅಸಮಾನತೆ, ಯೋಜನೆಯ ಉದ್ದೇಶ ಮತ್ತು ಪ್ರಕ್ರಿಯೆ, ವಿದೇಶಿ ಹಸ್ತಕ್ಷೇಪದ ಪರಿಣಾಮ, ಬಂಡವಾಳಶಾಹಿಯ ಮಾರುಕಟ್ಟೆಮುಖಿ ಧ್ಯೇಯ, ಪರಿಸರವನ್ನು ಸಂರಕ್ಷಿಸುವ ಅಗತ್ಯ, ಬರಗಾಲ – ಪ್ರವಾಹಪೀಡಿತ ಜನತೆಗಾಗುವ ಮೋಸ, ಇಂದು ಮತ್ತು ಮುಂದೆ ನಡೆಯುವ ಒಳಸಂಚು, ಸಾಧಿಸಬೇಕಾಗಿರುವ ಸಮಾನತೆ ಹಾಗೂ ಸ್ವಾವಲಂಬನೆ ನೀರು ಮತ್ತು ಇತರ ಶಕ್ತಿಮೂಲಗಳ ಅಭಿವೃದ್ಧಿ ಕುರಿತ ಪರ್ಯಾಯ ಮಾದರಿ.... ಮುಂತಾದವುಗಳ ಬಗ್ಗೆ ನಮ್ಮ ನಿಲವು ಮತ್ತು ನೀತಿಯನ್ನು ಕಾಲಕಾಲಕ್ಕೆ ಸ್ಪಷ್ಟಪಡಿಸುತ್ತಾ ಬಂದಿದ್ದೇವೆ. ಈ ಎಲ್ಲಾ ವಿಷಯಗಳನ್ನು ಒಂದೊಂದಾಗಿ ಸಂಬಂಧಪಟ್ಟವರ ಮುಂದಿಟ್ಟು ನಮಗೆ ಮನವರಿಕೆಯಾಗುವ ವಿವರಣೆಯನ್ನು ನೀಡಲು ಆಗ್ರಹಪಡಿಸಿದ್ದೇವೆ. ಇದಕ್ಕಾಗಿ ಹಲವಾರು ವೇದಿಕೆಗಳನ್ನು, ಮಾರ್ಗಗಳನ್ನು ಬಳಸಿದ್ದೇವೆ. ಯಾವ ವಿಚಾರದಲ್ಲೂ ನಮಗೆ ಅಕಾರಣ ಹಟವಿಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದೇವೆ. ಆದರೂ, ನಮಗೆ ದೊರಕಿದ ಪ್ರತಿಕ್ರಿಯೆ, ಪ್ರತಿಫಲ ಅತ್ಯಲ್ಪ.

ನಾವು 1987ರಲ್ಲಿ ನಮ್ಮ ದೇಶಿ ಹಾಗೂ ವಿದೇಶಿ ಮಿತ್ರರೊಂದಿಗೆ ಒಕ್ಕೊರಲಿನಿಂದ "ಬಡ್ಡಿ ವ್ಯವಹಾರದ ವಿಶ್ವಬ್ಯಾಂಕು – ಮಾಡಿತು ನಮ್ಮನ್ನು ಸಾಲಗಾರ" ಎಂದು ಸಾರಿದೆವು; 1989ರಲ್ಲಿ ನೂರಾರು ಸಂಘಟನೆಗಳ ಸಾವಿರಾರು ಕಾರ್ಯಕರ್ತರು "ವಿಕಾಸ ಬೇಕು–ವಿನಾಶ ಬೇಡ" ಎಂದು ಆಗ್ರಹಪಡಿಸಿದೆವು. 1990ರಲ್ಲಿ ಕಣಿವೆಗೆ ವಿವಿಧ ಕಡೆಗಳಿಂದ ಸಹಸ್ರಾರು ಜನ ಸಂಘರ್ಷ ಯಾತ್ರೆ ಕೈಗೊಂಡರು.

1991–94ರ ಕಾಲದಲ್ಲಿ ಕಣಿವೆಯ ಜನತೆ ಮುಳುಗಡೆ ಅನುಭವಿಸಿದರು; ಆದಿವಾಸಿಗಳು "ನರ್ಮದೆಯಲ್ಲಿ ಮುಳುಗೇವು ಆದರೆ ಇಲ್ಲಿಂದ ಕದಲೆವು" ಎಂಬ ಪ್ರತಿಜ್ಞೆ ಕೈಗೊಂಡರು; ಭಾರತ ಸರ್ಕಾರ ಮಟ್ಟದಲ್ಲಿ ವಿಶ್ವ ಬ್ಯಾಂಕು ನಡೆಸಿದ ಪರಿಶೀಲನಾ ಹಂತದಲ್ಲಿ ನರ್ಮದಾ ಬಚಾವೊ ಆಂದೋಲನ ಎತ್ತಿದ ಪ್ರಶ್ನೆಗಳನ್ನು ಅನುಮೋದಿಸಲಾಯಿತು. ಆಗ ಅಣೆಕಟ್ಟು ನಿರ್ಮಾಣ ಕಾರ್ಯ ಸ್ಥಗಿತಗೊಂಡಿತು; ಸುದೀರ್ಘ ಸತ್ಯಾಗ್ರಹವೂ ಕೊನೆಗೊಂಡಿತು. ಕೋರ್ಟು ಕೂಡ ಅಣೆಕಟ್ಟು ನಿರ್ಮಾಣ ಕಾರ್ಯಕ್ಕೆ ತಡೆಯಾಜ್ಞೆ ನೀಡಿತು; ಆಗ ಅಣೆಕಟ್ಟಿನ ಎತ್ತರ 81.5 ಮೀಟರ್. ಆದರೆ ಈಗ ಅಣೆಕಟ್ಟಿನ ಎತ್ತರವನ್ನು 88 ಮೀಟರ್‌ಗಳಿಗೆ ಹೆಚ್ಚಿಸಲು ಅನುಮತಿ ನೀಡಲಾಗಿದೆ. ಇದರಿಂದ ಇನ್ನೂ ಹೆಚ್ಚು ಸಂಖ್ಯೆಯಲ್ಲಿ ಆದಿವಾಸಿಗಳು ನಿರ್ವಸಿತರಾಗಲಿದ್ದಾರೆ. ಹಳ್ಳಿಗಳು ಮುಳುಗಲಿವೆ ಕೃಷಿಭೂಮಿ ಮತ್ತು ಕಾಡು ನಾಶವಾಗಲಿದೆ.

ನಮ್ಮ ಧ್ಯೇಯ ಕೇವಲ ನರ್ಮದಾ ನದಿಯನ್ನು, ಕಣಿವೆಯನ್ನು, ಅಲ್ಲಿನ ಜನತೆಯನ್ನು ಸರ್ದಾರ ಸರೋವರ ಅಣೆಕಟ್ಟನ್ನು ರಕ್ಷಿಸುವುದು ಮಾತ್ರವಾಗಿಲ್ಲ; ಒಟ್ಟಾರೆ ಜನರ ಬದುಕನ್ನು, ನೈಸರ್ಗಿಕ ಸಂಪನ್ಮೂಲಗಳನ್ನು, ಜನತೆಯ

ಗೌರವಯುತ ಜೀವನವನ್ನು, ಕೃಷಿ ಭೂಮಿ – ಕಾಡುಗಳನ್ನು, ಶ್ರಮಜೀವಿಗಳನ್ನು ರಕ್ಷಿಸುವುದಾಗಿದೆ. ಸರ್ದಾರ ಸರೋವರ ಅಣೆಕಟ್ಟು ತಡೆಗಟ್ಟುವುದು ನಿಮಿತ್ತ ಮಾತ್ರ. ಹಿಡಿಯಷ್ಟು ನಗರವಾಸಿ ಕೈಗಾರಿಕೋದ್ಯಮಿಗಳ ಹಿತಾಸಕ್ತಿ ರಕ್ಷಿಸಲೆಂದು, ದೇಶದ ಪ್ರಕೃತಿ ಸಂಪತ್ತನ್ನು ಸರ್ವನಾಶ ಮಾಡಲು ಹಾಗೂ ಆದಿವಾಸಿಗಳೇ ಮೊದಲಾದ ಶ್ರಮಜೀವಿಗಳ ಬದುಕನ್ನು ದೋಚಲು ಹುನ್ನಾರ ಹೂಡಿರುವ ಅಧಿಕಾರಸ್ಥರ ಸಂಚನ್ನು ನಾವು ಬಯಲಿಗೆಳೆಯಲೇಬೇಕು.

ಹೋರಾಟವನ್ನು ಮುಂದುವರೆಸುವುದೇ ನಮಗೆ ದಾರಿ. ಹೊಸ ಬದುಕಿಗಾಗಿ ಹೋರಾಟ ನಡೆಯಬೇಕಿದೆ. ಹೋರಾಟದ ವಿವಿಧ ಮಜಲುಗಳನ್ನು, ಆಯಾಮಗಳನ್ನು, ಹಂತಗಳನ್ನು, ಹೊಳಹುಗಳನ್ನು ನಾವು ಶೋಧನೆ ಮಾಡಬೇಕಾಗಿದೆ. ಮಹಾಸಾಗರವು ತನ್ನ ಪಾತ್ರವನ್ನು ಕಂಡುಕೊಳ್ಳುವಂತೆ ನಾವು ಹೋರಾಟಕ್ಕೆ ಪಾತ್ರವನ್ನು ಕಂಡುಕೊಳ್ಳಬೇಕಿದೆ. ಜನಾಂದೋಲನಗಳನ್ನು ಹೋರಾಟದಲ್ಲಿ ಭಾಗಿಯಾಗಿಸಿ, ಸಹಸ್ರ ಸಹಸ್ರ ಜನರ ಬೆಂಬಲ ಈ ಹೋರಾಟಕ್ಕಿದೆ ಎಂಬುದನ್ನು ಸ್ಪಷ್ಟಪಡಿಸಬೇಕಿದೆ.

ಈ ದಿಕ್ಕಿನಲ್ಲಿ ಹಲವಾರು ಮಿತ್ರರೊಂದಿಗೆ ಮಾತುಕತೆ ನಡೆಸಿ, ರೂಪಿಸಲಾದ ಹೆಜ್ಜೆಗಳನ್ನು ಈ ಮುಂದೆ ವಿವರಿಸಲಾಗಿದೆ. ದೇಶದ ಮೂಲೆ ಮೂಲೆಯಲ್ಲಿ ಹೋರಾಟಕ್ಕೆ ಸ್ಪಂದನ ಸಿಕ್ಕುತ್ತದೆಂದು ಆಶಿಸುತ್ತೇನೆ.

- ಈ ಮಳೆಗಾಲದಲ್ಲಿ ನೀರು ತುಂಬಿದಾಗ ಮುಳುಗಡೆಯಾಗುವ ಪ್ರದೇಶದಲ್ಲಿ ನಾವು ಎಷ್ಟೋ ಜನ ಇಲ್ಲಿಯೇ ಉಳಿಯುತ್ತೇವೆ; ನರ್ಮದ ನಮ್ಮನ್ನು ಸ್ವೀಕರಿಸಲಿ; ನಮಗಾಗಿ ನರ್ಮದ ತನ್ನ ಎಂದಿನ ಶಕ್ತಿ ರಭಸ, ಜೀವಶಕ್ತಿಯನ್ನು ಉಡುಗಿಸಿಕೊಳ್ಳದಿರಲಿ. ನಾವು ನಮ್ರತೆಯಿಂದ ನಮ್ಮ ತನು – ಮನಗಳನ್ನು ನರ್ಮದೆಗೆ ಅರ್ಪಿಸುತ್ತೇವೆ. ನಮ್ಮೊಂದಿಗೆ ಬರಬಯಸುವವರೆಲ್ಲಾ ಬರಲಿ.
- ಪ್ರಕೃತಿ, ಕೃಷಿಭೂಮಿ, ಅರಣ್ಯ, ಆದಿವಾಸಿ–ಕೃಷಿಕರ ಬದುಕು ಎಲ್ಲವನ್ನೂ ಮುಳುಗಿಸುವ ನಿರ್ಣಯ ಕೈಗೊಂಡಂತೆ, ಅಣೆಕಟ್ಟಿನ ಎತ್ತರವನ್ನು ಹೆಚ್ಚಿಸಲು ನಿರ್ಧಾರ ಮಾಡಿರುವ ಸರ್ಕಾರ, ನಮ್ಮನ್ನು ರಕ್ಷಿಸುವ ಢಂಬಾಚಾರದ ಪ್ರಯತ್ನ ನಡೆಸದಿರಲಿ. ನಮಗೆ ಪೊಳ್ಳು ಭರವಸೆಗಳನ್ನು ನೀಡದಿರಲಿ; ಸರ್ಕಾರದಿಂದ ಇಂಥ ಪ್ರಯತ್ನಗಳು ನಡೆದದ್ದೇ ಆದರೆ ನಾವು ಅವನ್ನು ಧಿಕ್ಕರಿಸುತ್ತೇವೆ. ಧಿಕ್ಕರಿಸುವ ರೀತಿಯನ್ನು, ತಂತ್ರವನ್ನು ನಾವೆಲ್ಲಾ ಸೇರಿ ನಿರ್ಧರಿಸೋಣ. ಆದರೆ ಸರ್ಕಾರದ ಹುನ್ನಾರಕ್ಕೆ ಬಲಿಯಾಗದಿರೋಣ.

ನರ್ಮದಾ ಕಣಿವೆಯ ಜನರ ಬದುಕನ್ನು ಹಾಗೂ ಪ್ರಕೃತಿಯನ್ನು ಗಂಡಾಂತರಕ್ಕೆ ತಳ್ಳಿದ ಹೊಸ ಸಂಸ್ಥೆಯ ರೂಪದಲ್ಲಿ ಈಗ ನ್ಯಾಯಾಂಗ ನಿಂತಿದೆ. ಇದನ್ನು ನಾವೀಗ ಪ್ರಶ್ನಿಸಬೇಕಾಗಿದೆ. ನ್ಯಾಯಾಂಗವು, ನ್ಯಾಯದ ಪ್ರಕ್ರಿಯೆಯ ಪರವಾಗಿರಬೇಕಲ್ಲದೇ, ಅನ್ಯಾಯದ ಪ್ರಕ್ರಿಯೆಯ ಪರವಲ್ಲ. ನ್ಯಾಯಾಂಗವೂ ಕೂಡ ಮನುಷ್ಯರಿಂದ ಮನುಷ್ಯ ಹಿತಕ್ಕಾಗಿ ಸೃಷ್ಟಿಗೊಂಡಿರುವ ಸಂಸ್ಥೆ. ಮನುಷ್ಯಹಿತದ ದೃಷ್ಟಿಯಿಂದಲೇ ಎತ್ತಲಾಗುತ್ತಿರುವ ಪ್ರಶ್ನೆಗಳಿಗೆ ಉತ್ತರಿಸಲು ಅಗತ್ಯ ಬಿದ್ದಲ್ಲಿ ನ್ಯಾಯಾಂಗವೂ ತನ್ನಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳಬೇಕು.

ಈ ಮಳೆಗಾಲದಲ್ಲಿ ಮುಳುಗಡೆಯಾಗಲಿರುವ ಪ್ರಕ್ರಿಯೆಯು, ನರ್ಮದಾ ಜಲವಿವಾದ ನ್ಯಾಯಪೀಠದ ಷರತ್ತುಗಳಿಗೆ ಹಾಗೂ ನ್ಯಾಯಾಲಯದ ಆದೇಶಗಳಿಗೆ ವಿರೋಧವಾಗಿದೆ. ಏಕೆಂದರೆ ಮತ್ತೆ ನಿರ್ವಸಿತರಾಗುವವರಿಗೆ ಪುನರ್ವಸತಿ ಕಲ್ಪಿಸಲು ಸಾಧ್ಯತೆಯೇ ಇಲ್ಲ. ಸಂವಿಧಾನದ ಆಶಯದ ಹಿನ್ನೆಲೆಯಲ್ಲಿ ಈ ಕೆಳಗಿನ ಸುಸಂಬದ್ಧವಾದ ಪ್ರಶ್ನೆಗಳನ್ನು ನಾವು ಎತ್ತಿದ್ದೇವೆ. ಅಧಿಕಾರಸ್ಥರ ಹಿತಾಸಕ್ತಿಯ ಮುಂದೆ ನ್ಯಾಯಾಂಗವು ಬಲಹೀನವಾಗದಿರಲಿ; ಮನುಷ್ಯ ಗೌರವ ಹಾಗೂ ನ್ಯಾಯವನ್ನು ನ್ಯಾಯಾಂಗವು ಸಂರಕ್ಷಿಸಲಿ.

- ಆದಿವಾಸಿಗಳು – ಕೃಷಿಕರು ಎತ್ತಿರುವ ಪ್ರಶ್ನೆಗಳನ್ನು ಪರಿಗಣಿಸಿ ವಿಮರ್ಶಿಸಿ, ನ್ಯಾಯಾನ್ಯಾಯವನ್ನು ಇತ್ಯರ್ಥ ಮಾಡಲು ಕೋರ್ಟಿಗೆ ಸಾಧ್ಯವಿಲ್ಲವೇ?
- ಈಗ ವಿವಾದವು ರಾಜ್ಯ ಶಕ್ತಿ ಮತ್ತು ದಮನಿತ ಸಾಮಾನ್ಯ ಜನರ ನಡುವೆ ಇರುವ ಕಾರಣ, ನ್ಯಾಯದಾನಕ್ಕಾಗಿ ಕೋರ್ಟು ಹೊಸ ರೀತಿ – ನೀತಿಗಳನ್ನು ಕಂಡು ಹಿಡಿಯಲು ಸಾಧ್ಯವಿಲ್ಲವೇ?
- ಕಡತಗಳನ್ನು ಅವಲಂಬಿಸುವುದನ್ನು ಬಿಟ್ಟು, ನಿರ್ವಸಿತರು, ಆದಿವಾಸಿಗಳು ಸಾಮಾನ್ಯ ಜನರು ಇರುವಲ್ಲಿಗೇ ಕೋರ್ಟು ತೆರಳಿ, ಅವರ ಸಂಕಷ್ಟವನ್ನು ಕಣ್ಣಾರೆ ಕಂಡು ಅಧಿಕಾರಸ್ಥರ ದ್ರೋಹದ ಪರಾಕಾಷ್ಠೆಯನ್ನು ಮನಗಾಣುವುದು ಸಾಧ್ಯವಾಗುವಂತೆ ಸಾರ್ವಜನಿಕ ವಿಚಾರಣೆ (ಪಬ್ಲಿಕ್ ಹಿಯರಿಂಗ್)ಗಳನ್ನು ನಡೆಸಲು ಸಾಧ್ಯವಿಲ್ಲವೇ? ಇದುವರೆಗೆ ಅನುಸರಿಸಿಕೊಂಡು ಬಂದ ಬ್ರಿಟಿಷ್ ಮಾದರಿಯ ನ್ಯಾಯದಾನ ಪದ್ಧತಿಯನ್ನು ಬದಲಾಯಿಸಬಾರದೇಕೆ?
- ನರ್ಮದಾ ಕಣಿವೆಯಲ್ಲಿ ನಡೆದಿರುವಂಥ ಬೃಹತ್ ಪ್ರಕೃತಿ – ಬದುಕು ನಾಶದ ಸಂದರ್ಭಗಳಲ್ಲಿ ಮೊದಲು ಅಣೆಕಟ್ಟು ನಿರ್ಮಾಣ ಕಾರ್ಯವನ್ನು ಸ್ಥಗಿತಗೊಳಿಸಿ ನಂತರ ವಿಚಾರಣೆ ನಡೆಸುವುದು ಸೂಕ್ತವಲ್ಲವೇ?
- ಸಂವಿಧಾನದ ನಿಯಮಗಳನ್ನು, ತನ್ನ ಮುಂಚಿನ ಆದೇಶಗಳನ್ನು ಮುಂದಿಟ್ಟು ಪ್ರಕೃತಿ – ಬದುಕು ಸಂರಕ್ಷಿಸಲೆಂದು ಆತ್ಮಾಹುತಿಗೆ ಸಿದ್ಧವಾಗಿರುವ ದಮನಿತ ಜನತೆಯ ಮೇಲೆ ನಿರ್ಬಂಧಗಳನ್ನು ಹೇರುವ ಮೂಲಕ, ಕೋರ್ಟು ದಮನಕಾರಿ ಆಡಳಿತ ಯಂತ್ರಕ್ಕೇ ಹೆಚ್ಚಿನ ಬಲವನ್ನು ತಂದುಕೊಡುವುದು ನ್ಯಾಯವೇ?
- ಅನ್ಯಾಯ ಹಾಗೂ ಸರ್ವನಾಶವನ್ನು ಧಿಕ್ಕರಿಸಿ ನಿಂತ ದಮನಿತ ಜನತೆ, ತನ್ನ ಆದೇಶ ಹಾಗೂ ಸಂವಿಧಾನದ ನಿಯಮಗಳನ್ನು ಉಲ್ಲಂಘಿಸಿದರೆಂದು – ಕೋರ್ಟು

ತೀರ್ಮಾನಿಸಿದರೂ, ಉಲ್ಲಂಘಿಸಿದ್ದಕ್ಕಾಗಿ ಶಿಕ್ಷೆ ನೀಡುವ ಮೊದಲು, ಅನ್ಯಾಯ ಹಾಗೂ ಸರ್ವನಾಶಕ್ಕೆ ಕಾರಣವಾಗಿರುವುದರ ಮೇಲೆ ತನ್ನ ಅಧಿಕಾರ ಚಲಾಯಿಸಲು ಹಾಗೂ ತೀರ್ಪು ನೀಡಲು ಕೋರ್ಟು ಮುಂದಾಗಬಾರದೇಕೆ?

- ಸಾರ್ವಜನಿಕ ಹಿತಾಸಕ್ತಿಯಿಂದಾಗಿ ಯೋಜನೆಯನ್ನು ರೂಪಿಸಿರುವುದಾಗಿ ಆಡಳಿತಯಂತ್ರವೊಂದು ಹೇಳಿಕೊಂಡ ಸಂದರ್ಭದಲ್ಲಿ ಆ ಯೋಜನೆಯು ಉಂಟು ಮಾಡಲಿರುವ ಸರ್ವನಾಶವನ್ನು ಅಲ್ಲಿನ ಜನತೆ ಹಾಗೂ ಜನ ಸಂಘಟನೆಗಳು ಮಂಡಿಸಿದರೆ, ಕೋರ್ಟು ಅದನ್ನು ಪರಿಗಣಿಸಿ, ಯೋಜನೆಯನ್ನೇ ಕೈಬಿಡಲು ಸರ್ಕಾರಕ್ಕೆ ಹೇಳಲು ಮುಂದಾಗಬಾರಬೇಕೆ? ಇಂಥ ಯೋಜನೆಗಳ ಬಹುಮಟ್ಟಿಗಿನ ಪ್ರಯೋಜನವು ಉಳ್ಳವರಿಗೆ, ಅಧಿಕಾರಸ್ಥರಿಗೆ, ಕಾಂಟ್ರಾಕ್ಟರುಗಳಿಗೇ ಆಗುತ್ತದೆಂಬ ಅಂಶದತ್ತ ಗಮನ ಹರಿಸಲು ಕೋರ್ಟು ಹಿಂಜರಿಯಬೇಕೇಕೆ?

ನಾವು ಈ ಪ್ರಶ್ನೆಗಳನ್ನು ಜನತಾಂತ್ರಿಕ ವ್ಯವಸ್ಥೆಯಲ್ಲಿ ಗಟ್ಟಿಯಾಗಿ ಕೇಳಬಯಸುತ್ತೇವೆ; ಇಡೀ ರಾಷ್ಟ್ರಕ್ಕೆ ನಮ್ಮ ಪ್ರಶ್ನೆಗಳು ಕೇಳಿಸಲಿ; ನಮಗೆ ಉತ್ತರ ಸಿಗಲಿ.

ನಮ್ಮ ಹೋರಾಟವನ್ನು ಮುಂದುವರೆಸುತ್ತಲೇ ನಾವು ಪ್ರಕೃತಿ–ಬದುಕು ನಾಶ ಮಾಡುವ ನರ್ಮದಾ ಕಣಿವೆಯಲ್ಲಿನ ಸರ್ದಾರ್ ಸರೋವರದಂಥ ಎಲ್ಲಾ ಯೋಜನೆಗಳನ್ನು ತೀವ್ರವಾಗಿ ವಿರೋಧಿಸುತ್ತೇವೆ.

ನರ್ಮದಾ ಮತ್ತು ಇತರ ಕಡೆ ಜನತೆಯ ಹಿತಕ್ಕೆ ಗಂಡಾಂತರ ಒದಗುತ್ತಿದೆ. ಜನಶಕ್ತಿಯನ್ನು ಹತ್ತಿಕ್ಕುವ ಅಧಿಕಾರಸ್ಥರ ಹಮ್ಮನ್ನು ಮುರಿಯಲೇಬೇಕು. ಸಮಾನತಾ ವಿರೋಧಿ ಅಭಿವೃದ್ಧಿ ಮಾದರಿಯನ್ನು ಪ್ರಶ್ನಿಸಲೇಬೇಕಾಗಿದೆ. ಇದಕ್ಕಾಗಿ ನಾವು ಸಂಘಟಿತ ಶಕ್ತಿಯನ್ನು ಬಳಸುತ್ತೇವೆ; ಅಹಿಂಸೆಯನ್ನು ಅವಲಂಬಿಸುತ್ತೇವೆ. ಈ ಮಳೆಗಾಲದಲ್ಲಿ ನಾವು ದೇಶದ ಹಾಗೂ ವಿಶ್ವದ ಮುಂದೆ ನಮ್ಮ ಪ್ರಶ್ನೆಯನ್ನು ಮಂಡಿಸುತ್ತೇವೆ. ಸಮಾಜದ ಹಿತಚಿಂತಕರು, ಶ್ರೀಸಾಮಾನ್ಯರು ನಮ್ಮ ಜೊತೆಗೂಡಲಿದ್ದಾರೆ. ಸಾವು ಮತ್ತು ಬದುಕಿನ ನಡುವೆ ಹೋರಾಡುತ್ತಿರುವ ನಮ್ಮ ದನಿ ಈಗ ದೇಶಾದ್ಯಂತ, ವಿಶ್ವಾದ್ಯಂತ ಮಾರ್ದನಿ ಗೊಳ್ಳಬೇಕಾಗಿದೆ.

ಒಂದು ವೇಳೆ, ನೂತನ ನ್ಯಾಯಪೀಠವೊಂದು ರಚನೆಯಾಗಿ, ಅದು ಸಾರ್ವಜನಿಕ ವಿಚಾರಣೆ (ಪಬ್ಲಿಕ್ ಹಿಯರಿಂಗ್) ನಡೆಸದೇ, ಅಣೆಕಟ್ಟು ಮತ್ತು ಇತರ ಸಂಬಂಧಿ (ಉದಾ: ಕಾಲುವೆ, ಕಾಲೊನಿ, ಅಭಯಾರಣ್ಯ ಇತ್ಯಾದಿ) ನಿರ್ವಸಿತರ ಅಗತ್ಯಕ್ಕೆ ತಕ್ಕಂತೆ ಪುನರ್ವಸತಿ ವ್ಯವಸ್ಥೆ ಆಗದೇ ಸರ್ದಾರ್ ಸರೋವರ ಯೋಜನೆ ಮುಂದುವರೆದದ್ದೇ ಆದಲ್ಲಿ ನಾವು ಅಹಿಂಸಾತ್ಮಕವಾಗಿ, ನೆಲೆಸಿದಲ್ಲೇ ಉಳಿದು, ನರ್ಮದೆಯಲ್ಲಿ ಜಲಸಮಾಧಿಯಾಗುವೆವು.

ನಮ್ಮ ಈ ನಿರ್ಧಾರವನ್ನು ಹತಾಶೆಯಿಂದ, ಭಯದಿಂದ, ಅಸಹಾಯಕತೆಯಿಂದ ನಾವು ಕೈಗೊಂಡಿಲ್ಲ; ಸೋತ ಭಾವನೆ ನಮ್ಮನ್ನು ಕಾಡಿಲ್ಲ; ನಮ್ಮ ಶಕ್ತಿ ಉಡುಗಿತೆಂಬುದೂ ಅಲ್ಲ; ಹೋರಾಟದಿಂದ ನಾವು ವಿಮುಖರಾದಂತೆಯೂ ಅಲ್ಲ, ಬದಲಾಗಿ, ಹೋರಾಟವನ್ನು ಇನ್ನೂ ಉನ್ನತ ಹಂತಕ್ಕೆ ಒಯ್ಯುವ ನಮ್ಮ ರೀತಿ ಇದು; ಅಷ್ಟೆ. ಇದನ್ನು ನಾವು ಸವಾಲಾಗಿ ಸ್ವೀಕರಿಸಿದ್ದೇವೆ. ನೈಜ ಅಭಿವೃದ್ಧಿ ಆಗ್ರಹಿಸಿ, ಅನುಸರಿಸಲಾಗುವ ನಮ್ಮ ಈ ರೀತಿ, ಜನತೆಯಲ್ಲಿ–ವಿಶೇಷವಾಗಿ ಯುವಜನರಲ್ಲಿ–ಹೋರಾಟದ ಕೆಚ್ಚನ್ನು ಮೂಡಿಸುತ್ತದೆಂಬುದು ನಮ್ಮ ಆಶಯ. ಇದು ಕಾರ್ಗಿಲ್‌ನಂಥ ಯುದ್ಧವಲ್ಲ. ಇಲ್ಲಿ ದ್ವೇಷವಿಲ್ಲ, ಬದಲಾಗಿ ಚಿತ್ತಸ್ಥೈರ್ಯವಿದೆ; ಹಿಂಸೆಯಿಲ್ಲ, ಬದಲಾಗಿ ಶಾಂತಿಯುತ ಕ್ರಿಯೆ ಇದೆ; ಬದಲಾವಣೆಯ ಮಾರ್ಗದಲ್ಲಿ ಗುರಿ ತಲುಪುವವರೆಗಿನ ಪ್ರಯಾಣ ಇದೆ.

ನಾವು ಜಲಸಮಾಧಿಯಾಗುವ ಸಂದರ್ಭವು ಒದಗಲಿಕ್ಕಿಲ್ಲವೆಂದು ನಾವು ಆಶಿಸುತ್ತೇವೆ; ಸಂತೋಷ – ನೆಮ್ಮದಿಯಿಂದ ಜೀವಿಸಿ, ಬದುಕನ್ನು ಅರ್ಥಪೂರ್ಣವಾಗಿ ಮುಗಿಸಬೇಕೆಂಬ ಆಸೆ ನಮಗೂ ಇದೆ. ಶೋಷಣೆ ಮತ್ತು ದಮನಗಳಿಲ್ಲದ ಜನತೆಯ ಆಳ್ವಿಕೆಯನ್ನು ಇಲ್ಲಿ ಕಾಣಬೇಕೆಂಬ ಅಚಲ ಹಂಬಲ ನಮ್ಮದು. ಜಾತಿ – ಕೋಮು ಹಮ್ಮು ಮತ್ತು ಯುದ್ಧೋನ್ಮಾದಗಳಿಲ್ಲದ ಸಮಾಜ ನಿರ್ಮಾಣ ನಮ್ಮ ಧ್ಯೇಯ. ನಮ್ಮೊಂದಿಗೆ ಪ್ರಕೃತಿ ಪ್ರಕೃತಿಯೊಂದಿಗೆ ನಾವು ಪೂರಕವಾಗಿ ಅರಳಬೇಕೆಂಬುದು, ದಲಿತರು, ಆದಿವಾಸಿಗಳು, ಶ್ರಮಜೀವಿಗಳು, ರೈತರು, ಮಹಿಳೆಯರು, ಮಕ್ಕಳು ಎಲ್ಲರೂ ತಮ್ಮ ತಮ್ಮ ಬದುಕುವ ಹಕ್ಕನ್ನು ಪಡೆದುಕೊಂಡಿರಲಿ ಎಂಬುದು ನಮ್ಮ ಕನಸು. ಸೂಕ್ತ ವೈಜ್ಞಾನಿಕ ಜ್ಞಾನ ಮತ್ತು ತಂತ್ರಜ್ಞಾನ ಬಳಸಿಕೊಂಡು, ಇವುಗಳ ಸಮರ್ಪಕ ಬಳಕೆ ಮಾಡಿಕೊಂಡು ಸರ್ವಹಿತಕಾರಿ ಅಭಿವೃದ್ಧಿಯನ್ನು ತರಬೇಕೆಂಬ ಸಂಕಲ್ಪ ನಮ್ಮದು. ಒಟ್ಟಾರೆ, ಮಾನವತೆಯ ಮತ್ತು ಪ್ರಕೃತಿಯ ಬದುಕಿನಲ್ಲಿ ಸಮಾನತೆ, ಸರಳಜೀವನ ಮತ್ತು ಸ್ವಾವಲಂಬನೆ ಅರ್ಥಪೂರ್ಣವಾಗಿ, ಹದವಾಗಿ ಬೆರೆತುಕೊಂಡಿರಬೇಕೆಂಬುದು ನಮ್ಮ ಆಕಾಂಕ್ಷೆ.

ಇದಕ್ಕಾಗಿ ನಾವು ಹೊಸ ಬಗೆಯ ರಾಜಕಾರಣವನ್ನು ಆರಂಭಿಸಬೇಕಾಗುತ್ತದೆ. ಜನತೆಯ ಮಧ್ಯೆ ಕೆಲಸ ಮಾಡುತ್ತಿರುವ ವಿವಿಧ ಆಂದೋಲನಗಳನ್ನು ನಾವು ಒಟ್ಟುಗೂಡಿಸಬೇಕಾಗುತ್ತದೆ. ಇಂದಿನ ಭ್ರಷ್ಟ, ಜನವಿರೋಧಿ, ಚುನಾವಣಾಧಾರಿತ ರಾಜಕಾರಣವನ್ನು ನಾವು ಆಮೂಲಾಗ್ರವಾಗಿ ಉರುಳಿಸಬೇಕಾಗುತ್ತದೆ. ಇದಕ್ಕಾಗಿ ನಮ್ಮಲ್ಲಿ ಅರ್ಪಣಾ ಮನೋಭಾವ ಮೂಡಬೇಕಾಗಿದೆ. ದೂರದೃಷ್ಟಿ, ಸಮಗ್ರ ಚಿಂತನೆ ಹಾಗೂ ದೃಢನಿರ್ಧಾರಗಳಿಂದ ನಾವು ಈಗ ಮುಂದಡಿ ಇಡಬೇಕಾಗಿದೆ. ■

# ಹೆಂಡತಿಯರು ಮಾರಾಟಕ್ಕಿದ್ದಾರೆ....?

ನೆತ್ತಿ ಮೇಲೆ ಸೂರ್ಯ ಉರಿಯುತ್ತಾನೆ. ನೆಲೆ ಸೂರ್ಯನ ಸುಡುವ ಬಿಸಿಲಿಗೆ ಹೊಳೆಯುತ್ತದೆ. ಒಣಗಿದ ಗೋಧಿ ಹುಲ್ಲನ್ನು ಅಲ್ಲೊಂದು, ಇಲ್ಲೊಂದು ಹಸುಗಳು ಮೇಯುತ್ತಿರುತ್ತವೆ. ಗಂಡಸರು ಮನೆಯಲ್ಲಿ ಕಾರ್ಡ್ಸ್ ಆಡುತ್ತಲೋ, ಹುಕ್ಕ ಸೇದುತ್ತಲೋ ಮನೆಯೊಳಗಿದ್ದಾರೆ. ಹೆಂಗಸರು ತಮ್ಮ ದೈನಂದಿನ ಯಾಂತ್ರಿಕ ಕೆಲಸಗಳಾದ ನೀರು ತರುವುದರಲ್ಲೋ, ಮಕ್ಕಳನ್ನು ನೋಡಿಕೊಳ್ಳುವುದರಲ್ಲೊ ಮುಳುಗಿ ಹೋಗಿದ್ದಾರೆ.

ರಾಜಾಸ್ಥಾನದ ದಕ್ಷಿಣ ಭಾಗದಲ್ಲಿ ನಾಟಾ ಎನ್ನುವ ಅಮಾನುಷ ಪದ್ಧತಿಯೊಂದು ಬಳಕೆಯಲ್ಲಿದೆ. ಈ ಪದ್ಧತಿಯ ಪ್ರಕಾರ ಗಂಡಂದಿರು ಯಾವುದೊ ಕ್ಷುಲ್ಲಕ ನೆಪದಲ್ಲಿ ಅವರ ಹೆಂಡತಿಯರನ್ನು ಮಾರಾಟ ಮಾಡುತ್ತಾರೆ. ಹಣದ ಆಸೆಗಾಗಿ ಹೆಂಡತಿಯರನ್ನು ಸಣ್ಣ ಪುಟ್ಟ ನೆಪಗಳಿಂದ ಮಾರಾಟ ಮಾಡುತ್ತಾರೆ.

ಜೈಪುರದ ದಿಯೋಲಿ ಜಿಲ್ಲೆಯ ಕಮಲಾ ನಾಲ್ಕು ವರ್ಷಗಳ ಹಿಂದೆ ಹಿಂದೂ ಸಂಪ್ರದಾಯದಂತೆ ಮದುವೆಯಾದಳು. ಅವಳ ಮಾವ ಅವಳ ಜೊತೆ ಅಸಭ್ಯವಾಗಿ ನಡೆದುಕೊಂಡಿದ್ದರಿಂದ, ಅವನನ್ನು ಧೂಷಿಸಿದಳು, ಅವಳ ಗಂಡ, ಹೆಂಡತಿಯ ಆರೋಪದಿಂದಾಗಿ ಕುಟುಂಬದ ಗೌರವ ಬೀದಿಪಾಲಾಗುವುದೆಂದು, ಆಕೆಯನ್ನು ತವರು ಮನೆಗೆ ವಾಪಸ್ಸು ಕಳಿಸುವುದೆಂದು ತೀರ್ಮಾನಿಸಿದ. ಹಳ್ಳಿಯಲ್ಲಿ ಪಂಚಾಯಿತಿ ನಡೆದು ಆತ ತೆಗೆದುಕೊಂಡ ತೀರ್ಮಾನವನ್ನೆ ಬೆಂಬಲಿಸಿತು. ಆ ಪ್ರಕಾರ ಆಕೆಯನ್ನು ತಂದೆಯ ಮನೆಗೆ ವಾಪಸ್ಸು ಕಳುಹಿಸಲಾಯಿತು. ಆದರೆ ಆಕೆಯ ತಂದೆ, ಗರ್ಭಿಣಿಯಾದ ಮಗಳ ಜವಾಬ್ದಾರಿಯನ್ನು ವಹಿಸಿಕೊಳ್ಳಲು ತಯಾರಿರಲಿಲ್ಲ, ಹಾಗಾಗಿ ವಯಸ್ಸಾದ ವಿಧುರನೊಬ್ಬನಿಗೆ ಅವನನ್ನು ಹಾಗೂ ಅವನ ನಾಲ್ಕು ಮಕ್ಕಳನ್ನು ನೋಡಿಕೊಳ್ಳಲು ಒಬ್ಬರು ಬೇಕಾಗಿದ್ದರಿಂದ, ಆತನೊಡನೆ ನಾಟಾ ಸಂಪ್ರದಾಯದ ಪ್ರಕಾರ ಒಪ್ಪಂದ ಮಾಡಿಕೊಂಡ.

ವಯಸ್ಸಾದ ವಿಧುರ ೪೨,೦೦೦ ರೂ.ಗಳನ್ನು ಕೊಡಲು ಒಪ್ಪಿಕೊಂಡ. ಇದರಲ್ಲಿ ಮೊದಲ ಅರ್ಧ ಭಾಗವನ್ನು ಅವಳ ತಂದೆಗೆ ನೀಡಲಾಯಿತು. ಉಳಿದರ್ಧ ಭಾಗವನ್ನು ಅವಳ ಗಂಡ ಮದುವೆಯ ಸಮಯದಲ್ಲಿ ಮಾಡಿದ ಖರ್ಚಿಗಾಗಿ ಅವನಿಗೆ ನೀಡಲಾಯಿತು. ಕಮಲಾ "ತನ್ನ ಸ್ಥಿತಿ ಗುಲಾಮಳಿಗಿಂತ ಬೇರೆಯಾಗಿಲ್ಲವೆಂದು ಒಪ್ಪಿಕೊಳ್ಳುತ್ತಾಳೆ. ಮಕ್ಕಳ, ಮನೆಯ, ಜವಾಬ್ದಾರಿಯ ಜೊತೆಗೆ ಅತ್ತೆಯ ಕಿರುಕುಳವನ್ನು ಸಹಿಸಿಕೊಳ್ಳಬೇಕು ಎನ್ನುತ್ತಾಳೆ. ಹೆಂಗಸರನ್ನು ಮಾರುವುದು ಸಹಜವಾಗಿ ಇಲ್ಲಿ ಕಂಡುಬರುತ್ತದೆ.

ಕೃಷಿ ಸಮುದಾಯಗಳಲ್ಲಿ ಸ್ತ್ರೀಯರು ಸಾಮಾನ್ಯವಾಗಿ ಕೃಷಿ ಕೆಲಸಗಳಿಗೆ ನೆರವಾಗುತ್ತಿದ್ದಳು. ಗಂಡಿನ ಕಡೆಯವರು, ಹೆಣ್ಣಿನ ತಂದೆ ತಾಯಿಯಲ್ಲಿ ಹಣ ಕೊಟ್ಟು ಹೆಣ್ಣು ತರುತ್ತಿದ್ದರು. ವಿಧವೆ, ಅಥವಾ ವಿವಾಹಿತ ಸ್ತ್ರೀಯಾದವಳು ಮತ್ತೊಂದು ವಿವಾಹವಾಗ ಬೇಕಾದರೆ, ಮೊದಲ ಮದುವೆಯ ಖರ್ಚನ್ನು ಕೊಟ್ಟುಬಿಡ ಬೇಕಾಗಿತ್ತು. ಆದರೆ ಕಳೆದ ದಶಕದಿಂದೀಚೆಗೆ, ಈ ಪದ್ಧತಿಯನ್ನು ವಿರೂಪಗೊಳಿಸಿ, ಸ್ತ್ರೀಯರನ್ನು ಹಲವಾರು ಬಾರಿ ಮಾರಾಟ ಮಾಡಲಾಗುತ್ತಿದೆ. ಈ ಅಮಾನುಷ ಪದ್ಧತಿಯನ್ನು ಕಂಡೂ ಗ್ರಾಮದ ಪಂಚಾಯಿತಿಗಳು, ಪೊಲೀಸರು ಕಣ್ಣುಮುಚ್ಚಿಕೊಂಡು ಕುಳಿತಿದ್ದಾರೆ. ಕೆಲವೊಮ್ಮೆ ಈ ಒಪ್ಪಂದಕ್ಕೆ ಒಳಗಾಗುವ ಹೆಣ್ಣಿನ ಬೆಲೆ ಲಕ್ಷಕ್ಕೂ ಮೀರಿದ ನಿದರ್ಶನಗಳು ಇವೆ. ನಾಟಾ ಬ್ರೋಕರ್ಸ್ ಅಣಬೆಗಳ ರೀತಿಯಲ್ಲಿ ಸುತ್ತಮುತ್ತ ಹುಟ್ಟಿಕೊಂಡಿದ್ದಾರೆ. ಈ ಮೂಲಕ ಹೆಚ್ಚು ಹೆಚ್ಚು ಕಮಿಷನ್ ರೂಢಿಕೊಳ್ಳಲು ಅನುಕೂಲಕರ ಹೆಣ್ಣುಮಕ್ಕಳಿಗಾಗಿ ತಲಾಶ್ ನಡೆಸುತ್ತಲೇ ಇರುತ್ತವೆ.

ಇಂತಹ ಒತ್ತಡಗಳಿಂದಾಗಿ, ಹಲವಾರು ಅಪರಾಧಗಳು ಮಾಮೂಲೆಂಬಂತೆ ಕಂಡುಬರುತ್ತವೆ. ಬಿಲ್ವಾರ ಜಿಲ್ಲೆಯ ಕಾಂತಾಳ ಘಟನೆ ಇದಕ್ಕೆ ಉತ್ತಮ ನಿದರ್ಶನ. ಕಾಂತಾಳನ್ನು ಅವಳ ತಂದೆ ತಾಯಿಯ ಮನೆಯಿಂದ ಅಪಹರಿಸಲಾಯಿತು. ಅವಳನ್ನು ಬಲಾತ್ಕಾರದಿಂದ ನಾಟಾ ಒಪ್ಪಂದಕ್ಕೆ ಗುರಿಪಡಿಸಲಾಯಿತು. ಇದರಿಂದಾಗಿ; ಬ್ರೋಕರ್ಸ್ ಕೈತುಂಬಾ ಕಮಿಷನ್‌ನನ್ನು ಪಡೆದರು. ಅವಳ ತಂದೆ, ಪರಿಶ್ರಮದಿಂದ ಅವಳನ್ನು ಪತ್ತೆಹಚ್ಚಿ, ವಾಪಸ್ಸು ಕರೆದುಕೊಂಡು ಬರಲು ೬೨,೦೦೦ ರೂ.ಗಳನ್ನು ಖರ್ಚು ಮಾಡಲಾಯಿತು. ಅವಳು ಕಳೆದುಕೊಂಡ ಪಾವಿತ್ರ್ಯತೆಯನ್ನು ಮರಳಿ ಪಡೆಯಲೆಂದೂ, ಏನೋ ಅವಳನ್ನು ದಿನಕ್ಕೆ ಆರು ಬಾರಿ ಸ್ನಾನ ಮಾಡಿಸಲಾಗುತ್ತಿದೆ.

ಹೆಣ್ಣುಮಕ್ಕಳ ಮಾರಾಟ ಪುನಃ ತೀವ್ರಗತಿಯಲ್ಲಿ ಮಾರಾಟ ಆಗುತ್ತಿರುವುದನ್ನು ಗಮನಿಸಿದ ಅತ್ಯಾಚಾರ ವಿರೋಧಿ ಸಮಿತಿಯು ಒಂದು ಸಮೀಕ್ಷೆಯನ್ನು ನಡೆಸಿತು. ಈ ಸಮಿತಿಯ ವರದಿಯ

ಪ್ರಕಾರ ಸಾಂಡ್ಲಾ ಹಾಗೂ ಬನ್‌ವರ್ತಲಾ ಸುತ್ತಮುತ್ತ, ೫೧೭ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಲಾಯಿತು. ಹಿಂದುಳಿದ ಜನಾಂಗದ ವಿವಾಹಗಳಲ್ಲಿ ಸುಮಾರು ೫೦ರಷ್ಟು ವಿವಾಹಗಳು ಮುರಿದು ಬೀಳುತ್ತಿದ್ದವು. ಈ ಸಮಿತಿಯ ಸದಸ್ಯರಾದ ಇಂದಿರಾ ಪಂಚೋಲಿಯವರ ಪ್ರಕಾರ, ಪ್ರತಿಯೊಂದು ಮನೆಯು ಈ ಸಮಸ್ಯೆಯಿಂದ ನರಳುತ್ತಿತ್ತು. ವಿವಾಹಿತಳಾದ ಸ್ತ್ರೀ ತಂದೆ ತಾಯಿಯ ಮನೆಗೆ ಹಿಂದಿರುಗಲು ನಿರಾಕರಿಸಿದರೆ, ಸಮಸ್ಯೆಯು ಮತ್ತಷ್ಟು ಸಂಕೀರ್ಣ ಸ್ಥಿತಿಯನ್ನು ತಲುಪುತ್ತಿತ್ತು. ಮದುವೆಯ ಸಂದರ್ಭದಲ್ಲಿ ಅವರಿಗಿರುವ ಎಳೆಯ ಮಕ್ಕಳನ್ನು ವಿನಿಮಯ ಮಾಡಲಾಗುತ್ತದೆ. ಹೆಣ್ಣು ಮಕ್ಕಳು ತಿರಸ್ಕರಿಸಿದ ಸಂದರ್ಭದಲ್ಲಿ ಅವರ ಗಂಡು ಮಕ್ಕಳನ್ನು ನೀಡದೇ, ಸಮಸ್ಯೆಯನ್ನು ಬಗೆಹರಿಸಲಾಗುತ್ತದೆ. ಇಂತಹ ಸಂದರ್ಭದಲ್ಲಿ ಹಳ್ಳಿ ಹಳ್ಳಿಗಳೇ ಹತ್ತಿ ಉರಿಯುವ ಸಂದರ್ಭಗಳು ಉಂಟು.

ಇಂತಹ ವಿವಾಹಗಳಿಗೆ ಇತರೆ ಒತ್ತಡಗಳು ಕಾರಣವಾಗುತ್ತವೆ. ವರದಕ್ಷಿಣೆಯ ಪದ್ಧತಿ ಹಾಗೂ ಆಧುನಿಕ ಜೀವನಶೈಲಿಯ ಬೇಡಿಕೆಗಳು, ವಿವಾಹ ಮುರಿದು ಹೋಗುವ ಕಾರಣವಾಗಿವೆ.

ಸಿಮ್ಲಾರಾಮ್, ನಾಪಾ ಕಿ ಕೇಡಾ ಹಳ್ಳಿಯ ಮುಗ್ಧ ಹುಡುಗಿ. ಕಾಲೇಜಿಗೆ ಹೋಗುವ ಅವಳ ಗಂಡನಿಗೆ ಅನಕ್ಷರಸ್ಥೆ ಹೆಂಡತಿ ಬೇಡವಾಗಿದ್ದಾಳೆ. ಅವಳ ಗಂಡ, ಅವಳನ್ನು ಬಂದು ಕರೆದುಕೊಂಡು ಹೋಗಬಹುದು, ಅಥವಾ ಕರೆದುಕೊಂಡು ಬರಲು ಯಾರನ್ನಾದರೂ ಕಳುಹಿಸಬಹುದೆಂದು ನಾಲ್ಕು ವರ್ಷಗಳಿಂದ ಕಾಯುತ್ತಲೇ ಇದ್ದಾರೆ. ಅವಳ ತಂದೆ, ಮಗಳನ್ನು ಗಂಡನ ಮನೆಯವರು ಹೇಗೆ ಕರೆದು ಹೋಗುವುದಿಲ್ಲವೋ ನೋಡೋಣವೆಂದು, ಸಂದರ್ಭಕ್ಕಾಗಿ ಕಾಯುತ್ತಿದ್ದಾರೆ. ಇದರ ನಡುವೆ, ಅವರ ಮನೆಯ ಸೊಸೆ, ತನ್ನ ತಂದೆ ತಾಯಿಯ ಮನೆಗೆ ಹೋಗಲು ತಿರಸ್ಕರಿಸುತ್ತಾಳೆ. ಏಕೆಂದರೆ, ಅವಳ ತಂದೆ ತಾಯಿ ಅವಳನ್ನು ಹೆಚ್ಚಿನ ಹಣಕ್ಕಾಗಿ ಮಾರುವ ಪ್ರಯತ್ನದಲ್ಲಿದ್ದಾರೆ. ಹೀಗಾಗಿ ಸಿಮ್ಲಾಳ ತಂದೆ, ಸಂದಿಗ್ಧ ಸ್ಥಿತಿಯಲ್ಲಿ ನರಳುತ್ತಿದ್ದಾರೆ. "ನನ್ನ ಮಗನಿಗೆ ನಾಟಾ ವ್ಯವಸ್ಥೆ ಮಾಡಬೇಕಾದರೆ, ೫೦,೦೦೦ ರೂ.ಗಳನ್ನು ನನ್ನ ಸೊಸೆಯ ತಂದೆ ತಾಯಿಯರಿಗೆ ನೀಡಬೇಕು. ಅವರು ನನಗೆ ಅಷ್ಟೇ ಹಣವನ್ನು ಕೊಡಬೇಕಾಗುತ್ತದೆ. ಸಿಮ್ಲಾಗೂ ಸಹ ಈ ವ್ಯವಸ್ಥೆಯನ್ನು ಮಾಡಬೇಕು.

ಸಿಮ್ಲಾ ಈ ಅಮಾನುಷ ಪದ್ಧತಿಯನ್ನೇ ವಿರೋಧಿಸುತ್ತಾಳೆ. ನಾನು ನನ್ನ ಗಂಡನ ಮನೆಗೆ ಹೋಗಲು ಇಷ್ಟಪಡುತ್ತೇನೆ. ಫುಟ್‌ಬಾಲ್‌ತರ ನನ್ನನ್ನು ಅಲ್ಲಿಂದ, ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ಒದೆಯುವುದನ್ನು ನಾನು ಸಹಿಸುವುದಿಲ್ಲ ಎಂದು ಸಿಮ್ಲಾ ನುಡಿಯುತ್ತಾಳೆ.

ಗ್ರಾಮದಲ್ಲಿ ನಡೆಯುವ ಪಂಚಾಯಿತಿಗಳು ಹೆಣ್ಣುಮಕ್ಕಳ ಅಸಹಾಯಕ ಪರಿಸ್ಥಿತಿಯ ಬಗ್ಗೆ ಕುರುಡಾಗಿದೆ. ಕೆಲವೊಮ್ಮೆ ನಾಟಾಗಳ ಬೆಲೆಯನ್ನು ಹೆಚ್ಚಿಸಲು ಪಂಚಾಯಿತಿಗಳು ಕಾರಣವಾಗುತ್ತದೆ. ಗಂಡಂದಿರು ಅವರ ಹೆಂಡತಿಯರನ್ನು ಹಣದ ಆಸೆಗಾಗಿ ಮಾರುತ್ತಿದ್ದಾರೆ. ಆದರೆ, ಸ್ತ್ರೀಯರ ಹಿತರಕ್ಷಣೆಯ ಬಗ್ಗೆ ಇವರೆಲ್ಲಾ ಕಣ್ಣುಮುಚ್ಚಿಕೊಂಡಿದ್ದಾರೆಂದು ಸ್ತ್ರೀ ಸಂಘಟನೆಯೊಂದರಲ್ಲಿ ಕ್ರಿಯಾಶೀಲವಾಗಿ ಕೆಲಸ ಮಾಡುತ್ತಿರುವ ಕವಿತಾ ನುಡಿಯುತ್ತಾರೆ. ಆಕೆ ಅಂಗನವಾಡಿ ಕಾರ್ಯಕರ್ತೆಯಾದ ಲಾಲಿಬಾಯಿಯವರ ಜೀವನವನ್ನು ಉದಾಹರಿಸುತ್ತಾರೆ. ಲಾಲಿಬಾಯಿಯ ಗಂಡ ಸತ್ತ ನಂತರ ಆಕೆಯನ್ನು ನಾಟಾ ಪದ್ಧತಿ ಒಪ್ಪಿಕೊಳ್ಳುವಂತೆ ಬಲಾತ್ಕರಿಸಲಾಯಿತು. ತನಗೆ ನೀಡಲಾಗುತ್ತಿರುವ ಹಿಂಸೆಯನ್ನು ತಪ್ಪಿಸಿಕೊಳ್ಳಲು ಆಕೆ ಕೊನೆಗೆ ಮಹಿಳಾ ಸಂಘಟನೆಯ ನೆರವನ್ನು ಕೋರಬೇಕಾಯಿತು.

ಈ ಪದ್ಧತಿಯಿಂದ ಪುರುಷರು ನಾನಾ ರೀತಿಯ ಹಿಂಸೆಗೆ ಗುರಿಯಾಗುತ್ತಿದ್ದಾರೆ. ಕೆಲವು ಹೆಣ್ಣುಮಕ್ಕಳು, ಗಂಡನನ್ನು ತೊರೆದು ಹೋದಾಗ, ಅವನು ಕೊಡಬೇಕಾದ ಹಣವನ್ನು ಹೊಂದಿಸಿ ಕೊಡಲು ಇನ್ನೊಬ್ಬಳನ್ನು ಮದುವೆಯಾಗಬೇಕಾಗುತ್ತದೆ.

ಈ ಕ್ರೂರ ಪದ್ಧತಿಯ ವಿರುದ್ಧ ಪೊಲೀಸರು ಕೈಚಲ್ಲಿ ಕುಳಿತಿದ್ದಾರೆ. ಏಕೆಂದರೆ, ಈ ಪದ್ಧತಿಯು ಕಷ್ಟಮರಿ ಕಾನೂನಿನಡಿಯಲ್ಲಿ ಬರುತ್ತದೆ. ಅನಕ್ಷರತೆಯು ಹೆಚ್ಚಿನ ಪ್ರಮಾಣದಲ್ಲಿ ಸ್ತ್ರೀಯರಲ್ಲಿ ಕಂಡುಬರುತ್ತಿದೆ. ಸ್ವಲ್ಪ ವಿದ್ಯಾವಂತರಾದ ಮಹಿಳೆಯರು ಈ ಪದ್ಧತಿಯನ್ನು ಒಪ್ಪಿಕೊಳ್ಳಲು ಹಿಂಜರಿಯುತ್ತಾರೆ. ಕೆಲವೊಮ್ಮೆ ಪುರುಷರು ಸುಲಭವಾಗಿ ಹೆಂಡತಿಯನ್ನು ಬಿಟ್ಟುಬಿಡಲು ಸಾಧ್ಯವಾಗುತ್ತಿಲ್ಲ. ತಿರಸ್ಕೃತರಾದ ಹೆಂಡತಿಯರು ವರದಕ್ಷಿಣೆ ಹಾಗೂ ಹಿಂಸೆಯ ಕಾನೂನಿನಡಿಯಲ್ಲಿ ಕೇಸನ್ನು ದಾಖಲುಗೊಳಿಸುತ್ತಿದ್ದಾರೆ. ಆದರೆ ಇವರ ಸಂಖ್ಯೆ ವೈವಾಹಿಕ ಚೌಕಟ್ಟೆಂಬ ಭ್ರಮೆಯ ಭದ್ರತೆಯಡಿಯಲ್ಲಿ ಹುದುಗಿರುವ ಇಂತಹ ಅಮಾನುಷ ಪದ್ಧತಿಗಳು ನಾವು ಹೆಮ್ಮೆ ಪಡುವ ಹಿಂದೂ ಸಂಪ್ರದಾಯದ ಚೌಕಟ್ಟಿನಲ್ಲಿರುವುದು ವಿಪರ್ಯಾಸವಾದರೂ, ಸತ್ಯ. ಇಂತಹ ಸತ್ಯಗಳು ನಮ್ಮ ಮಹಿಳೆಯರ ಕಣ್ಣು ತೆರೆಸಬೇಕಾಗಿದೆ. ಇದು ಸಂಘಟನಾತ್ಮಕ ಪ್ರಯತ್ನದಿಂದ ಮಾತ್ರ ಸಾಧ್ಯವಾಗುತ್ತದೆ.

●

# ತಕ್ಕ ಪ್ರತೀಕಾರ

- ಜಯಾ ಯಾಜಿ ಶಿರಾಲಿ

ಇತ್ತೀಚೆಗೆ ಒಂದು ದಿನ ಪತ್ರಿಕೆಯ ಸುದ್ದಿಯೊಂದು ನನ್ನ ಗಮನ ಸೆಳೆಯಿತು. ಮುಂಬಯಿಯಲ್ಲಿ ಓರ್ವ ದೀರ ಮಹಿಳೆಯ ಸಾಹಸದ ಕಥೆ ಅದಾಗಿತ್ತು. ತಾಯಿಯ ಕುಮ್ಮಕ್ಕಿನಿಂದ ಮಡದಿಗೆ ಬೆಂಕಿಯಿಕ್ಕಿದ ತನ್ನ ಗಂಡನನ್ನೇ ಆ ಮಹಿಳೆ ಮೈಹೊತ್ತು ಉರಿಯುವಾಗ ಎದುರಿಗಿದ್ದ ಗಂಡನನ್ನೇ ಅಪ್ಪಿಹಿಡಿದು ತನ್ನೊಂದಿಗೆ ಪರಲೋಕಕ್ಕೆ ಕರೆದೊಯ್ದು ತನ್ನ ಸಾಹಸವನ್ನು ಮೆರೆದಿದ್ದಳು ಆಕೆ. ಅದನ್ನೋದಿದ ಕೂಡಲೇ ನನಗೆ ೧೯೭೭ ಮಾರ್ಚ್ ಕನ್ನಡ ಮಾಸಪತ್ರಿಕೆ (ಮಯೂರ)ಯೊಂದರಲ್ಲಿ ಪ್ರಕಟವಾದ ನನ್ನ ಕಥೆ 'ಪ್ರತೀಕಾರ' ತಟ್ಟನೆ ನೆನಪಾಯಿತು. ನನ್ನ ಮನಸ್ಸು ಈ ಘಟನೆಗೂ - ಈ ಕಥೆಗೂ ತಳುಕು ಹಾಕಿತು.

ನನ್ನ ಆ ಕಥೆಯಲ್ಲಿ ವರದಕ್ಷಿಣೆಯ ಹಿಂಸೆಯನ್ನು ತಾಳಲಾರದ ಓರ್ವ ಪುಟ್ಟ ಮಗುವಿನ ತಾಯಿಯ ವ್ಯಥೆ ಇತ್ತು. ಸೊಸೆಗೆ ಸೀಮೆಎಣ್ಣೆ ಸುರಿದು ಕಡ್ಡಿಗೀರಿದಳು. ಆ ಕ್ಷಣ ಸೊಸೆ ಉರಿಯುತ್ತಿದ್ದ ತನ್ನ ದೇಹವನ್ನು ಲಕ್ಷಿಸದೆ ಎದುರಿಗಿದ್ದ ಅತ್ತೆಯನ್ನು ಬಿಗಿಯಾಗಿ ಅಪ್ಪಿಹಿಡಿದು 'ತನ್ನ ಮಗವನ್ನು ಅನಾಥ ಮಾಡ್ತಿಯಾ? ಇಲ್ನೋಡು, ನಿನ್ನ ಮಗನನ್ನೂ ಅನಾಥ ಮಾಡ್ತೀನಿ ಎನ್ನುತ್ತಾ ತನ್ನೊಂದಿಗೆ-ವರದಕ್ಷಿಣೆಯ-ಭೂತವಾಗಿ ಕಾಡಿಸುತ್ತಿದ್ದ ತನ್ನತ್ತೆಯನ್ನು ಪರಲೋಕಕ್ಕೆ ಕರೆದೊಯ್ಯುತ್ತಾಳೆ ಮತ್ತು ವರದಕ್ಷಿಣೆ ಬೆಂಕಿಯ ಒಂದು ಕಿಡಿಯನ್ನು ತಾನು ಆರಿಸಿದ ಸಂತೃಪ್ತಿಯಿಂದ ಅಸುನೀಗುತ್ತಾಳೆ. ಇದು 'ಪ್ರತೀಕಾರ' ಕಥೆಯ ವಸ್ತು. ಈ ಕಥೆ ಪ್ರಕಟವಾದಾಗ ಪತ್ರಿಕೆಯಲ್ಲದೆ ವ್ಯಕ್ತಿಕವಾಗಿ ನನಗೆ ಅನೇಕ ಪತ್ರ ಬಂದಿತ್ತು. ವರದಕ್ಷಿಣೆಯ ದಳ್ಳುರಿಯಲ್ಲಿ ಬೇಯುವ ಕೆಲವು ಮಹಿಳೆಯಾದರೂ ಇಂತ ಸಾಹಸ ಮಾಡಿದರೆ... ಸಮಾಜದಿಂದ ಈ ಭೂತ ತುಸುವಾದರೂ ಓರ್ವ ಹುಡುಗಿ ತನಗೇನಾದರೂ ಇಂತಹ ಸಮಸ್ಯೆ ಎದುರಾದರೆ ತಾನು ಖಂಡಿತವಾಗಿ ಇದೇ ದಾರಿಯನ್ನು ಹಿಡಿಯುತ್ತೇನೆ.' ಎಂದು ಬರೆದು ತನಗೆ ದಾರಿತೋರಿದ ಬಗ್ಗೆ ಕೃತಜ್ಞತೆ ಅರ್ಪಿಸಿದ್ದಳು!

ಕಥೆ ಬರೆದು ಮುಗಿಸಿದಾಗ ನನಗೂ ಸಹ ಪೈಶಾಚಿಕ ಮನೋಭಾವದ ಓರ್ವ ಮಹಿಳೆಯನ್ನು ಮಗುಇಸಿದ ತೃಪ್ತಿ ತಂದಿತ್ತು. ವೈಯಕ್ತಿಕವಾಗಿ ನಾನು ಮಹಿಳೆಯರಿಂದಲೆ ಮಹಿಳೆಯರ ಶೋಷಣೆ ನಡೆಯುತ್ತಿರುವ ಈ ವರದಕ್ಷಿಣೆ ಪಿಡುಗಿನಿಂದ ದೂರವಾಗಲು ಮಹಿಳೆ ಇಂತಹ ಏನಾದರೂ ಸಾಹಸ ಮಾಡಲೇಬೇಕೆನ್ನುವವಳು.

ಮುಂಬಯಿಯ ಈ ಮಹಿಳೆ ತಾಯಿಯ ಮಾತಿಗೆ ಕೋಲೆಬಸವನಂತೆ ತಲೆಯಾಡಿಸುತ್ತ ತನ್ನ ಸ್ವಂತ ವಿಚಾರಶಕ್ತಿ, ನಿರ್ಧಾರವನ್ನು ಕಳಕೊಂಡ ತನ್ನ ಪತಿರಾಯನನ್ನೇ ತನ್ನೊಂದಿಗೆ ಕರೆದೊಯ್ದು ತನ್ನ ಅತ್ತೆಗೆ ಪುತ್ರವಿಯೋಗದ ಕಹಿಯನ್ನು ಉಣಬಡಿಸಿದ್ದಳು. ನಿಜಕ್ಕೂ ಅತ್ತೆ ಈ ಕೆಲಸ ಮಾಡುವಾಗ ತಾನು ಸತ್ತರೂ - ಈ ಅತ್ತೆ ಮತ್ತು ಗಂಡ ಇನ್ನೊಂದು ಹುಡುಗಿಗೂ ಇದೇ ಅವಸ್ಥೆಯನ್ನು ತರುತ್ತಾರೆಂದು ಖಂಡಿತ ನಂಬಿರಬೇಕು. ಮುಂದುವರಿಯುವ ಈ ಅಧ್ಯಾಯಕ್ಕೆ ಮುಕ್ತಿಕೊಟ್ಟ ಆ ಧೀರ ಮಹಿಳೆ ನನ್ನ ಮನದಲ್ಲಿ ಸ್ಥಾನ ಗಿಟ್ಟಿಸಿದ್ದಾಳೆ.

ಸರಕಾರಿ ಕಾನೂನು, ಪೊಲೀಸ್ ವಿಭಾಗದಲ್ಲಿ ವರದಕ್ಷಿಣೆಯ ನಿವಾರಣೆಗೆ ಅನೇಕ ಕಾನೂನುಗಳಿದ್ದರೂ ಹಲವಾರು ಪ್ರಸಂಗಗಳಲ್ಲಿ ರಾಜಕೀಯ, ಲಂಚಕೋಳಿತನ, ಸುಳ್ಳುಪುರಾವೆಗಳಿಂದ ಏನೂ ಮಾಡಲಾಗದೆ ಮಹಿಳೆ ಕೈಕಟ್ಟಿ ಕುಳಿತುಕೊಳ್ಳಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಇಂತಹ ತಕ್ಕ ಪ್ರತೀಕಾರ'ಗಳೇ ಯೋಗ್ಯವೆನಿಸುತ್ತದೆ. ಮಹಿಳೆಯರ ಶೋಷಣೆ, ಅನ್ಯಾಯಕ್ಕೆ ತಕ್ಕ ಪ್ರತೀಕಾರಗಳು ಆಕೆಯಿಂದಲೇ ಬಂದರೇನೇ, ಸಮಸ್ಯೆಗೆ ಒಂದಾದರೊಂದು ದಿನ ಮುಕ್ತಿ ಸಿಗಬಹುದು.

ಮಾನಸ ಪತ್ರಿಕೆ ಚೆನ್ನಾಗಿ ಹೊರಹೊಮ್ಮುತ್ತಿದೆ. ಸಂತಸದ ಸಂಗತಿಯೆಂದರೆ ಯಾವುದೇ ಜಾಹೀರಾತುಗಳಿಲ್ಲದಿರುವುದು. ಪತ್ರಿಕೆ ಇನ್ನು ಹೆಚ್ಚಿನ ಅಭಿವೃದ್ಧಿ ಹೊಂದಲಿ ಎಂದು ಹಾರೈಸುತ್ತೇನೆ.

- ಬಾಲಕೃಷ್ಣ ಕೆ. ಕುಲಕರ್ಣಿ

# ಪೊಲೀಸರ ದಬ್ಬಾಳಿಕೆ ವಿರೋಧಿಸಿ ಪ್ರತಿಭಟನೆ

ಕೇರಳದಲ್ಲಿ ಪ್ರತಿಭಟನಾ ಪ್ರದರ್ಶನಗಳು ಸರ್ವೇಸಾಮಾನ್ಯವಾಗಿ ನಡೆಯುತ್ತವೆ. ಆದರೆ ಇತ್ತೀಚಿಗೆ 'ಸೆಕ್ಸ ವರ್ಕರ್ಸ್' ತಮ್ಮ ಮೇಲೆ ಪೊಲೀಸರು ನಡೆಸುತ್ತಿರುವ ದಬ್ಬಾಳಿಕೆಯನ್ನು ವಿರೋಧಿಸಿ, ಮಾನವೀಯ ಹಕ್ಕುಗಳ ದಮನವಾಗುತ್ತಿರುವುದನ್ನು ಮಾಧ್ಯಮಗಳ ಹಾಗೂ ಲೇಖಕರ ಗಮನಕ್ಕೆ ತಂದರು.

ತಿರುವನಂತಪುರದಲ್ಲಿ ಒಂದು ನಿರ್ದಿಷ್ಟವಾದ ಕೆಂಪು ದ್ವೀಪದ ಪ್ರವೇಶವಿಲ್ಲ. ಆಧರೆ ಹೋಟೆಲ್‌ಗಳಲ್ಲಿ ಈ ವ್ಯಾಪಾರ ಅವ್ಯಾಹತವಾಗಿ ನಡೆಯುತ್ತಿದೆ. ಕೋವಲಂ ಸಮುದ್ರ ದಂಡೆ ಲೈಂಗಿಕ ಮಾರುಕಟ್ಟೆಯಾಗಿರುವುದಲ್ಲದೆ, ಅಂತರ ರಾಷ್ಟ್ರೀಯ ಪ್ರವಾಸಿಗರನ್ನು ತಣಿಸುವ ತಾಣವು ಆಗಿದೆ.

ಸಮೀಕ್ಷೆಯೊಂದರ ಪ್ರಕಾರ ರಸ್ತೆಯಲ್ಲಿ ಈ ವ್ಯಾಪಾರವನ್ನೂ ನಡೆಸುವವರ ಸಂಖ್ಯೆ ೧೮೦ ರಿಂದ ೨೦೦ರ ವರೆಗೆ. ಆದರೆ ಪೊಲೀಸರ ಪ್ರಕಾರ ರಸ್ತೆಯಲ್ಲಿ ಈ ವ್ಯಾಪಾರ ಮಾಡುವವರ ಸಂಖ್ಯೆ ಕಡಿಮೆ ಇದೆ. ಸಾರ್ವಜನಿಕರ ಗಮನಕ್ಕೆ ಬರದೇ ಪೊಲೀಸರ ಹಾಗೂ ಸೆಕ್ಸ್ ವ್ಯಾಪಾರ ನಡೆಸುವವರ ಮಧ್ಯ ಇಲಿ-ಬೆಕ್ಕಿನಾಟ ನಡದೇ ಇತ್ತು. ಆದರೆ ಕೆಲವು ಸಮಾಜ ಕಾರ್ಯಕರ್ತರು ಇವರ ಸಮಸ್ಯೆಯನ್ನು ಸಾರ್ವಜನಿಕರ ಗಮನಕ್ಕೆ ತರುವ ಪ್ರಯತ್ನವನ್ನು ಮಾಡಿದ್ದರಿಂದ, ಸೆಕ್ಸ್ ವರ್ಕರ್ಸ್ ಮೇಲೆ ಪೊಲೀಸರು ನಡೆಸುತ್ತಿರುವ ನಡೆಸುತ್ತಿರುವ ದಬ್ಬಾಳಿಕೆಯನ್ನು ಸಾರ್ವಜನಿಕರ ಗಮನಕ್ಕೆ ತರಲಾಯಿತು.

ಪೊಲೀಸರ ಪ್ರಕಾರ ವೇಶ್ಯಾವೃತ್ತಿ ನಡೆಸುವ ಮಹಿಳೆಯರು ಬಸ್ ನಿಲ್ದಾಣಗಳಲ್ಲಿ ಹಾಗೂ ಬೀದಿಗಳಲ್ಲಿ ಸಾರ್ವಜನಿಕರಿಗೆ ತೊಂದರೆಯನ್ನು ಉಂಟುಮಾಡುತ್ತಾರೆ. ಸೆಕ್ಸ್‌ಗೆ ಸಂಬಂಧಪಟ್ಟಂತೆ ಅನೇಕ ಅಪರಾಧಗಳಿಗೆ ಅವರು ಪ್ರೇರಣೆಯನ್ನು ನೀಡುತ್ತಾರೆ. ಗಿರಾಕಿಗಳನ್ನು ದೋಚುತ್ತಾರೆ ಎಂದು ಪೊಲೀಸರು ಆರೋಪಿಸುತ್ತಾರೆ.

ನಾವು ಸಂಘಟಿತರಾಗುವುದು ಪೊಲೀಸರಿಗೆ ಇಷ್ಟವಿಲ್ಲ. ಹಾಗಾಗಿ ನಮ್ಮ ಎಲ್ಲಾ ಪ್ರಯತ್ನಗಳಿಗೆ ಅವರು ಅಡ್ಡಿಮಾಡುತ್ತಾರೆ. ಪೊಲೀಸರು ಸ್ಥಳೀಯ ಶಕ್ತಿಯೊಂದಿಗೆ ಶಾಮೀಲಾಗುತ್ತಾರೆ. ಇಬ್ಬರೂ ಸೇರಿ ನಮ್ಮನ್ನು ಹಿಂಸಿಸುತ್ತಾರೆ, ಎಂದು ಈ ಸಂಘಟನೆಯರ ಕಾರ್ಯಕರ್ತೆಯರು ಹೇಳುತ್ತಾರೆ. ನಾವು ಸಂಘಟಿತರಾಗುತ್ತಿದ್ದಂತೆ, ಕಾನೂನಿನಡಿಯಲ್ಲಿ ನಮ್ಮನ್ನು ಹೆಚ್ಚಿನ ಸಂಖ್ಯೆಯಲ್ಲಿ ಬಂದಿಸತೊಡಗಿದ್ದಾರೆ. ಸಾರ್ವಜನಿಕ ಸ್ಥಳಗಳಲ್ಲಿ ಅಸಭ್ಯವಾಗಿ ನಡೆದುಕೊಳ್ಳುವ ಕಾರಣ ನೀಡಿ, ನಮ್ಮನ್ನು ಬಂಧಿಸಲಾಗುತ್ತಿದೆ. ಆದರೆ ಈ ಕಾರಣದಿಂದ ಯಾವ ಪುರುಷನನ್ನು ಬಂಧಿಸಲಾಗುತ್ತಿಲ್ಲ. ಈ ಸಂಘಟನೆಯ ಕಾರ್ಯಕರ್ತೆಯರ ಪ್ರಕಾರ ಈಗಿರುವ ಕಾನೂನನ್ನು ತೆಗೆದು ಹಾಕಬೇಕಾಗಿದೆ, ಏಕೆಂದರೆ ಕಾನೂನಿನ ಮುಖ್ಯ ಉದ್ದೇಶ ಸ್ತ್ರೀಯರನ್ನು ರಕ್ಷಿಸುವುದಾಗಿದ್ದರೂ, ಪೊಲೀಸರು ಈ ಕಾನೂನನ್ನು ಬಳಸಿ ಮಹಿಳೆಯರನ್ನು ಹಿಂಸಿಸುತ್ತಾರೆ.

ಈ ಸಂಘಟನೆಯ ಕ್ರಿಯಾಶೀಲ ಕಾರ್ಯಕರ್ತೆಯಾದ ತಂಗಮಣಿ "ನಾನು ಈ ವ್ಯಾಪಾರವನ್ನು ನಡೆಸುವುದು ಅಪರಾಧವಾದರೆ, ನಮ್ಮೊಡನೆ ಸಂಪರ್ಕ ಪಡೆಯುವ ಪುರುಷರು ಅಪರಾಧಿಗಳಾಗುತ್ತಾರೆ. ಆದರೆ ಪೊಲೀಸರು ಪುರುಷರನ್ನು ಮಾತ್ರ ಏಕೆ ಬಿಡುತ್ತಾರೆ?

ಪ್ರಸ್ತುತದಲ್ಲಿ ಬಳಕೆಯಲ್ಲಿರುವ ಕಾನೂನು ಅಸ್ಪಷ್ಟತೆಯಿಂದ ಕೂಡಿದೆ. ವೇಶ್ಯಾವೃತ್ತಿಯನ್ನು ನಡೆಸುವ ವ್ಯಕ್ತಿಗೆ ಮೂರು ತಿಂಗಳ ಜೈಲು ಶಿಕ್ಷೆಯಾದರೆ ಸಾರ್ವಜನಿಕ ಸ್ಥಳಗಳಲ್ಲಿ ಸಿಕ್ಕುಬೀಳುವ ವ್ಯಕ್ತಿ ಆರು ತಿಂಗಳ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ.

ಕಾನೂನು ವೇಶ್ಯಾವೃತ್ತಿಯಲ್ಲಿರುವ ಸ್ತ್ರೀಯರ ಹಕ್ಕುಬಾಧ್ಯತೆಗಳನ್ನು ರಕ್ಷಿಸುವಲ್ಲಿ ವಿಫಲವಾಗುತ್ತದೆ. ಪೊಲೀಸರಿಂದ ನಡೆಯುವ ಹಿಂಸೆಯನ್ನು ಬಹಿರಂಗವಾಗಿ ಪ್ರತಿಭಟಿಸುವುದರ ಮೂಲಕ ವೇಶ್ಯಾವೃತ್ತಿಯಲ್ಲಿನ ಮಹಿಳೆಯರು ಮಾಧ್ಯಮಗಳ ಗಮನ ಸೆಳೆದದ್ದು ಮಾತ್ರವಲ್ಲ, ನಮ್ಮ ಸಮಾಜದ ದ್ವಂದ್ವ ಮುಖಗಳನ್ನು ನಾವು ಕನ್ನಡಿ ಹಿಡಿದು ನೋಡುವಂತೆ ಮಾಡಿದ್ದಾರೆ.

# "ಆತನ ಮುಖ ನನ್ನ ಹಾಗೇ ಇತ್ತು!"

ಜಾನ್ ಜ್ರಾನ್ ಪರಕೀಯ ದಡದಲ್ಲಿ ರಣರಂಗದಲಿ ಹೋರಾಡಲು ನಡೆದ, ಆತನ ತಾಯಿಗೆ ಖಂಡಿತವಾಗಿ ಅವನ ಬಗ್ಗೆ ಹೆಮ್ಮೆ ಆತ ಅವನ ಸಮವಸ್ತ್ರ, ಮತ್ತಿಲ್ಲದರಲ್ಲಿ ನೇರವಾಗಿ, ಎತ್ತರವಾಗಿ ನಿಂತ ಆತನ ತಾಯಿಯ ಮುಖವರಳಿ ಹೇಳಿದಳು :

"ಮಗನೇ ನೀನು ಅಂದವಾಗಿ ಕಾಣುತ್ತಿದ್ದೀಯ,
ನೀನು ಮಗನೆಂಬುದೇ ನನಗೆ ಆನಂದ
ನೀನು ಬಂದೂಕು ಹಿಡಿದಿದ್ದೀಯ ಎಂದು ತಿಳಿದಾಗ
ನನಗೆ ಹೆಮ್ಮೆ ಎನಿಸುತ್ತದೆ.

ಕ್ಯಾಪ್ಟನ್ ಹೇಳಿದ ಹಾಗೆ ನಡೆದುಕೋ, ನಿನಗೆ
ಅನೇಕನೇಕ ಪದಕಗಳು ಸಿಗುತ್ತವೆ
ಮತ್ತೆ ನೀನು ಮನೆಗೆ ಬಂದಾಗ ಅವನ್ನೆಲ್ಲ ಗೋಡೆಗೆ ನೇತು ಹಾಕೋಣ

ಹಳೆಯ ಉಗಿಬಂಡಿ ಎಳೆದುಕೊಂಡು ಹೋಗುವಾಗ
ಜಾನ್ ತಾಯಿ ಕೂಗತೊಡಗಿದಳು.
ನೆರೆ-ಹೊರೆಯವರಲ್ಲೆಲ್ಲಾ ನುಡಿಯತೊಡಗಿದಳು

"ಹೋಗುತ್ತಿರುವವನು ಅವನು ನನ್ನ ಮಗ,
ಅವನೀಗ ಸೈನಿಕ ನಿಮಗೆ ಗೊತ್ತೇ ?"
ಅಕ್ಕ-ಪಕ್ಕದವರಿಗೆ ಅರ್ಥವಾಗಿದೆಯೆಂಬುದನ್ನು
ಆಕೆ ಗಟ್ಟಿಗೊಳಿಸಿಕೊಂಡಳು.

ಆಗೀಗ ಆಕೆಗೆ ಪತ್ರ ಬರುತ್ತಿತ್ತು, ಆಕೆಯ ಮುಖ
ನಗುವಿನಿಂದ ಕೂಡಿರುತ್ತಿತ್ತು
ಅದನ್ನು ಪಕ್ಕದವರಿಗೆ ತೋರಿಸುವಾಗ, ಆಕೆ ಕೊಚ್ಚಿಕೊಂಡಳು
ಆಕೆಯ ಮಗನ ಸಮವಸ್ತ್ರ, ಬಂದೂಕಗಳ ಬಗ್ಗೆ

ನೀವೆಂದಿರಿ ಇವೆಲ್ಲ ಚನ್ನಾದ ಹಳೆಯ ಮಾದರಿ ಯುದ್ಧವೆಂದು'
ಓಹ ! ಹಳೆಯ ಮಾದರಿಯ ಯುದ್ದ !
ಪತ್ರಗಳು ನಿಂತು ಹೋದವು, ದೀರ್ಘಕಾಲದವರೆಗೆ
ಅವುಗಳ ಸುಳಿವಿಲ್ಲ.

ಹತ್ತು ತಿಂಗಳು ಅಥವಾ ಹೆಚ್ಚು ಕಾಲದವರೆಗೆ ಅವು ಬರಲೇ ಇಲ್ಲ
ಕೊನೆಗೊಂದು ಪತ್ರ ಸುದ್ದಿ ತಂತು, ಹೋಗಿ ಉಗಿಬಂಡಿ ಕಾಯಿ,
ಯುದ್ಧದಿಂದ ನಿನ್ನ ಮಗ ಮನೆಗೆ ಹಿಂತಿರುಗುತ್ತಿದ್ದಾನೆ.

ಆಕೆ ನಕ್ಕಳು, ಉಗಿ ಬಂಡಿಯತ್ತ ನಡೆದಳು, ಸುತ್ತಲೆಲ್ಲಾ ನೋಡಿದಳು,
ಎಲ್ಲೂ ಕಾಣಲಿಲ್ಲ ತನ್ನ ಸೈನಿಕ ಮಗನನ್ನು,
ಜನರು ಕಣ್ಮರೆಯಾಗುತ್ತಿದ್ದ ಹಾಗೆ, ಕೊನೆಗೆ ಕಂಡಳು ಆಕೆ ಮಗನನ್ನು
ಕಂಡಾಗ ಆಕೆಯ ಕಣ್ಣುಗಳ ನಂಬಲಿಲ್ಲ ಆಕೆ !

ಗುಂಡೇಟಿನ ಮುಖ, ಕತ್ತರಿಸಿ ಹೋದ ಕೈ
ಸೊಂಟದ ಸುತ್ತದ ಮೆಟಲ್ ಪಟ್ಟಿಯನ್ನು
ಆತನು ನಿಧಾನ ಗತಿಯಲ್ಲಿ ಪಿಸುಗುಟ್ಟಿದ, ಆ ಮುಖದ
ಪರಿಚಯ ಹತ್ತಲೇ ಇಲ್ಲ ಆಕೆಗೆ.

ಓಹ ! ದೇವರೇ, ಆತನ ಮುಖ ಗುರುತಿಸಲೂ ಕಷ್ಟ ಸಾಧ್ಯ
"ಓಹ ಪ್ರೀತಿಯ ಮಗನೇ ಹೇಳು, ನಿನಗೆ ಅವರೇನು ಮಾಡಿದರು?
ನೀನ್ಹೇಗೆ ಈ ಸ್ಥಿತಿಗೆ ಬಂದೆ ?
ಆತ ಮಾತನಾಡಲು ಯತ್ನಿಸಿದ, ಆದರೆ ಬಾಯಿ ಅಲುಗಾಡಲೇ ಇಲ್ಲ.

ತಾಯಿ ತನ್ನ ಮುಖ ಎತ್ತಲೋ ತಿರುಗಿಸಿದಳು.

'ತಾಯೀ ನಿನಗೆ ನೆನಪಿಲ್ಲವೇ ? ನಾನು ಯುದ್ಧಕ್ಕೆ ನಡೆದಾಗ,
ನೀನು ತಿಳಿದೆ, ನಾನು ಅತ್ಯುತ್ತಮ ಕೆಲಸ ಮಾಡುತ್ತೇನೆಂದು,
ನಾನು ರಣರಂಗದಲ್ಲಿದ್ದೆ, ನೀನು ಮನೆಯಲ್ಲಿದ್ದೆ
ಹೆಮ್ಮೆಯಿಂದ ಬೀಗುತ್ತ
ನನ್ನ ಶೂಗಳಲ್ಲಿ ನೀನು ನಿಂತಿರಲಿಲ್ಲ.

ಓಹ್, ಅಲ್ಲಿರುವಾಗ ನನಗನ್ನಿಸಿತು, ದೇವರೇ ನಾನೇನು ಮಾಡುತ್ತಿದ್ದೇನೆ ಇಲ್ಲಿ ?
ಇನ್ನಾರನ್ನೋ ಸಾಯಿಸಲು ಅಥವಾ ಸಾಯಲು ನಾನು ಪ್ರಯತ್ನಿಸುತ್ತಿದ್ದೆ.
ನನ್ನ ವೈರಿ ನನಗೆ ಹತ್ತಿರವಾದಾಗ ನನಗೆ ಭೀಭತ್ಸವೆನಿಸಿದ್ದೆಂದರೆ
ಆತನ ಮುಖ ಕಂಡಿತ್ತು ನನ್ನ ಮುಖದ ಹಾಗೆ.

ಓಹ್ ದೇವರೇ ! ನನ್ನ ಹಾಗೇ
ನನಗನ್ನಿಸಿತು, ಗುಡುಗು ಉರುಳುವಾಗ
ದುರ್ನಾತ ಬಡಿಯುವಾಗ
ನಾನೊಂದು ಆಟದ ಬೊಂಬೆಯಾಗಿದ್ದೆನಷ್ಟೆ

ಘರ್ಜನೆ, ಹೊಗಿಯೊಳಗೆ - ಈ ದಾರ ಕತ್ತರಿಸಿ ಹೋಯಿತು
ಬಂದೂಕಿನ ಗುಂಡು ನನ್ನ ಕಣ್ಣುಗಳ ಕಿತ್ತುಕೊಂಡಿತು

ಅಲ್ಲಿಂದ ನಡೆದುಬಿಡಲು ಆತ ತಿರುಗುತ್ತಿದ್ದಾಗಲೇ, ತಾಯಿ ಇನ್ನೂ
ಆಘಾತದಲ್ಲಿಯೇ ಇದ್ದಳು
ಮೆಟಲ್ ಬ್ರ್ಯಾಸ್‌ನ ನೆರವಿನಿಂದ ಎದ್ದು ನಿಂತ ಆತ
ಹೋಗಲು ತಿರುಗಿದ ಆತ ತಾಯಿಯ ಹತ್ತಿರ ಕರೆದ
ತನ್ನೆಲ್ಲ ಪದಕಗಳನ್ನು ಆಕೆಯ ಉಡಿಯಲ್ಲಿ ಸುರಿದ.

- 'ಅಪರಿಚಿತ'

# ಅಪಾಯಕಾರಿ ಗರ್ಭನಿರೋಧಕಗಳು

ಜುಲೈ ೧೧ರಂದು ಜಗತ್ತಿನಾದ್ಯಂತ ಜನಸಂಖ್ಯೆ ದಿನವನ್ನು ಆಚರಿಸಲಾಗುವುದು. ಜನಸಂಖ್ಯೆ ಸ್ಫೋಟದ ಬಗ್ಗೆ ತೀರಾ ಕಂಗೆಟ್ಟವರಂತೆ ಈ ದಿನವನ್ನು ಆಚರಿಸಲಾಗುವುದು. ಕಳೆದ ಹದಿನೈದು ವರ್ಷಗಳಿಂದ ಹಾನಿಕಾರಕ ಗರ್ಭ ನಿರೋಧಕಗಳ ಬಗ್ಗೆ ಹಾಗೂ ಯಾವುದೇ ನೈತಿಕ ನೆಲೆಯಿಲ್ಲದ ಜನಸಂಖ್ಯಾ ನಿಯಂತ್ರಣ ಪಾಲಿಸಿಯ ಬಗ್ಗೆ ಸಹೇಲಿ ಪ್ರತಿಭಟನಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಲೇ ಬಂದಿದೆ. ಸ್ತ್ರೀಯರನ್ನು ಜನಸಂಖ್ಯಾ ನಿಯಂತ್ರಣದಲ್ಲಿ ಆಟದ ವಸ್ತುವನ್ನಾಗಿ ಉಪಯೋಗಿಸಿಕೊಳ್ಳುತ್ತಿರುವುದರ ಹಿನ್ನೆಲೆಯಲ್ಲಿ ಜನಸಂಖ್ಯಾ ನಿಯಂತ್ರಣದ ವಾದವನ್ನು ನೋಡಬೇಕಾಗಿದೆ.

ಇತ್ತೀಚಿಗೆ ಕುಟುಂಬ ಕಲ್ಯಾಣ ಕಾರ್ಯಕ್ರಮದಲ್ಲಿ ಚುಚ್ಚುಮದ್ದಿನ ರೂಪದ ಗರ್ಭನಿರೋಧಕವನ್ನು ಜನಪ್ರಿಯಗೊಳಿಸುವ ಪ್ರಯತ್ನವನ್ನ ನೋಡಬಹುದು. ೧೯೯೨ರಲ್ಲಿ ಯುನೈಟೆಡ್ ನೇಷನ್ ಆಫ್ ಪಾಪ್ಯುಲೇಷನ್ ಸರ್ಕಾರದೊಂದಿಗೆ ನಡೆಸಿದ ಅಧ್ಯಯನ ಪ್ರಕಾರ ಚುಚ್ಚುಮದ್ದಿನ ರೂಪದ ಗರ್ಭನಿರೋಧಕಗಳು ಕುಟುಂಬ ಕಲ್ಯಾಣ ಕಾರ್ಯಕ್ರಮದ ಒಂದು ಭಾಗವಾಗಿದೆ. ಮಹಿಳಾ ಸಂಘಟನೆಗಳು ಚುಚ್ಚುಮದ್ದಿನ ರೂಪದ ಗರ್ಭನಿರೋಧಕಗಳನ್ನು ಬಲವಾಗಿ ವಿರೋಧಿಸಿದರೂ ೧೯೯೮ ಡಿಸೆಂಬರ್‌ನಲ್ಲಿ ಐ.ಸಿ.ಎಂ.ಆರ್. ಹಾಗೂ ಐ.ಆರ್.ಆರ್. ಸಂಸ್ಥೆಗಳು ಇವುಗಳನ್ನು ಬಳಸುವುದನ್ನು ಅನುಮೋದಿಸಿದವು. ಈ ಗರ್ಭನಿರೋಧಕಗಳನ್ನು ಹೆಜ್ಜೆ ಹಜ್ಜೆಯಾಗಿ ಜನಪ್ರಿಯಗೊಳಿಸಲಾಗುತ್ತಿದೆ.

೧೯೬೦ ರಿಂದಲೂ ಚುಚ್ಚುಮದ್ದಿನ ರೂಪದ ಗರ್ಭನಿರೋಧಕಗಳಾದ ನೆಟಿನ್ ಹಾಗೂ ಡೆಪ್ರೋ ಪ್ರವೇರಾ ಪ್ರಶ್ನಾರ್ಹವಾಗಿವೆ. ಅವುಗಳ ಸುರಕ್ಷತೆಯ ಬಗ್ಗೆ ಜಗತ್ತಿನಾದ್ಯಂತ ಅನುಮಾನವನ್ನು ವ್ಯಕ್ತಪಡಿಸಲಾಯಿತು. ೧೯೮೭ರಲ್ಲಿ ನೆಟಿನ್‌ನನ್ನು ಹಾಗೂ ೧೯೯೩ರಲ್ಲಿ ಡಿಪ್ರೋ ಪ್ರವೇರಾವನ್ನು ಭಾರತದಲ್ಲಿ ಉಪಯೋಗಿಸಬಹುದೆಂದು ದಾಖಲುಗೊಳಿಸಲಾಗಿದೆ. ೧೯೯೪ರಲ್ಲಿ ಇವುಗಳನ್ನು ಮೊದಲು ಮಾರುಕಟ್ಟೆಗೆ ಬಿಡುಗಡೆ ಮಾಡಲಾಯಿತು. ಕುಟುಂಬ ಕಲ್ಯಾಣ ಕಾರ್ಯಕ್ರಮದಲ್ಲಿ ಇದನ್ನು ದೊಡ್ಡ ಪ್ರಮಾಣದಲ್ಲಿ ಉಪಯೋಗಿಸಿ ಜನಪ್ರಿಯಗೊಳಿಸಲು ಪ್ರಯತ್ನಿಸಿತು. ಮಹಿಳಾ ಸಂಘಟನೆಗಳು ಬಲವಾಗಿ ವಿರೋಧಿಸಿದಲ್ಲದೆ, ಕೋರ್ಟಿನಲ್ಲಿ ಕೇಸನ್ನು ಹಾಕಲಾಯಿತು.

ನೆಟಿನ್‌ನನ್ನು ಬಳಸುವುದರಿಂದ ಹಲವಾರು ದುಷ್ಪರಿಣಾಮವನ್ನು ಎದುರಿಸಬೇಕಾಗುತ್ತದೆ. ಪ್ರತಿ ತಿಂಗಳು ಮುಟ್ಟಿನ ಚಕ್ರದಲ್ಲಿ ವ್ಯತ್ಯಾಸವಾಗುವುದು, ಅತಿ ರಕ್ತಸ್ರಾವ ಅಥವಾ ರಕ್ತಸ್ರಾವ ಆಗದೇ ಇರುವುದು. ಹೃದಯ, ಮೆದುಳು ಹಾಗೂ ಕರುಳುಗಳಲ್ಲಿ ರಕ್ತ ಹೆಪ್ಪುಗಟ್ಟುವುದು, ಮೂಳೆ ಸವೆತ, ಬಿಳಿಮುಟ್ಟು ಹೋಗುವುದು, ಸಕ್ಕರೆ ಪ್ರಮಾಣದಲ್ಲಿ ವ್ಯತ್ಯಾಸ, ಸುಸ್ತು, ಬಂಜೆತನ, ಕ್ಯಾನ್ಸರ್ ಮುಂತಾದ ತೊಂದರೆಗಳು ಉಂಟಾಗುತ್ತವೆ.

ಸಾರ್ವಜನಿಕ ಆರೋಗ್ಯದ ದುರವಸ್ಥೆಯ ಬಗ್ಗೆ ಎಲ್ಲರಿಗೂ ಅರಿವಿದೆ. ಚುಚ್ಚುಮದ್ದಿನ ರೂಪದ ಗರ್ಭ ನಿರೋಧಕವನ್ನು ದೊಡ್ಡ ಪ್ರಮಾಣದಲ್ಲಿ ಪ್ರಯೋಗಿಸುವಷ್ಟು ಪರಿಣಾಮಕಾರಿಯಾಗಿ ಉಪಯೋಗಿಸುವ ಸಾಮರ್ಥ್ಯವನ್ನು ಕುಟುಂಬ ಕಲ್ಯಾಣ ಇಲಾಖೆಯು ಹೊಂದಿಲ್ಲ. ಚುಚ್ಚುಮದ್ದು ನೀಡುವ ವಿಧಾನ, ಅವುಗಳ ನಡುವೆ ಇರಬೇಕಾದ ಅಂತರ ಅತ್ಯಂತ ಮುಖ್ಯವಾದುದು. ಚುಚ್ಚುಮದ್ದು ನೀಡಿದ ನಂತರ ಪುನಃ ಪರಿಶೀಲನೆ ಮಾಡುವುದು, ತುರ್ತು ಚಿಕಿತ್ಸೆಯ ಅಗತ್ಯ ಮುಂತಾದ ಸಮಸ್ಯೆಗಳನ್ನು ಗಮನಿಸಿದರೆ, ಇದನ್ನು ಉಪಯೋಗಿಸುವುದು ಎಷ್ಟು ಅಪಾಯಕಾರಿ ಎಂದು ತಿಳಿಯುತ್ತದೆ. “ಅನುಕೂಲಕರ” ಎಂಬ ವಾದವು ಅವರ ದೇಹದ ಮೇಲೆ ಅವರಿಗೆ ಅಧಿಕಾರ ಇಲ್ಲದಿರುವುದನ್ನು ಸೂಚಿಸುತ್ತದೆ.

ನೆಟಿನ್ ಪ್ರಯೋಗದ ವಿರುದ್ಧ ಸಹೇಲಿ ಈಗಾಗಲೇ ಪ್ರತಿಭಟನೆಯನ್ನು ಹುಟ್ಟುಹಾಕಿದೆ. ದೀರ್ಘಾವಧಿಯಲ್ಲಿ ಸ್ತ್ರೀಯರು ಆರೋಗ್ಯದ ಮೇಲೆ ದುಷ್ಪರಿಣಾಮವನ್ನು ಬೀರುವ ನೆಟಿನ್‌ನ್ನು ಸರ್ಕಾರ ಒತ್ತಾಯಪೂರ್ವಕವಾಗಿ ಜನರ ಮೇಲೆ ಹೊರಲು ಕಾರಣವನ್ನು ವಿಶ್ಲೇಷಿಸಿದೆ. ಜನಸಂಖ್ಯಾ ನಿಯಂತ್ರಣ, ಸರ್ಕಾರ ಹಾಗೂ ಹಣ ನೀಡುವ ವಿದೇಶಿ ಏಜೆನ್ಸಿಗಳು, ಔಷಧಿಗಳನ್ನು ತಯಾರಿಸುವ ಕಂಪನಿಗಳ ನಡುವೆ ಒಂದು ರೀತಿಯ ಸಂಬಂಧವಿದೆ.

ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿ ಜನಸಂಖ್ಯೆಯ ಹೆಚ್ಚಳವಿರುವುದರಿಂದ, ಗರ್ಭನಿರೋಧಕಗಳನ್ನು ಕಂಡುಹಿಡಿಯಲು ಅಪಾರವಾದ ಹಣವನ್ನು ಖರ್ಚು ಮಾಡಲಾಗುತ್ತಿದೆ. ಇಂತಹ ಕಂಪನಿಗಳು ಸ್ತ್ರೀಯರಿಗೆ ಒಪ್ಪಿಗೆಯಾಗುವ ಗರ್ಭನಿರೋಧಕಗಳನ್ನು ಕುರಿತು ಸಂಶೋಧನೆ ನಡೆಸುವ ಬದಲು ಸಾರ್ವಜನಿಕರಿಗೆ ಒಪ್ಪಿಗೆಯಾಗುವ ನಿರೋಧಕಗಳನ್ನು ಕಂಡುಹಿಡಿಯುತ್ತಾರೆ. ಹಾಗಾಗಿ ಪರಿಣಾಮಕಾರಿಯಾಗುವುದಕ್ಕೆ ಹೆಚ್ಚು ಒತ್ತು ನೀಡುವ ಉದ್ದೇಶದಿಂದ ಘರ್ಷಣೆ ನಡೆಯುತ್ತಾ ಹೋಗುತ್ತದೆಯೇ ವಿನಃ ಮಹಿಳೆಯರಿಗೆ ಒಪ್ಪಿಗೆಯಾಗುವ ಗರ್ಭನಿರೋಧಕಗಳನ್ನು ಕಂಡುಹಿಡಿಯುವುದರಲ್ಲಿ ಅಲ್ಲ.

*ಸಹೇಲಿಯ ಪತ್ರಿಕಾ ಹೇಳಿಕೆ, ನವದೆಹಲಿ*

# ಓ ಶಾಂತಿಯೇ ನೀ ಎಲ್ಲೆಡೆ ಗಸ್ತು ತಿರುಗು

**ಮಗನನ್ನು ಕಳೆದುಕೊಂಡು ಎಂಥ ಹೆಮ್ಮೆ. ಬೆಳಗ್ಗೆ ರಾತ್ರಿ ಕಣ್ಣೀರು ಹಾಕುವುದೇ ಹೆಮ್ಮೆಯಾಗಿದೆ**
- ಕಾರ್ಗಿಲ್ ನಲ್ಲಿ ಪ್ರಾಣತೆತ್ತ ಸೋಮವಾರಪೇಟೆ ತಾಲ್ಲೋಕ್ ಸುಬೇದಾರ್ ಸಿಂಗೂರ್ ಮೇದಪ್ಪನ ಅಮ್ಮ.

**ಈ ಕಡೆಯೋ, ಆ ಕಡೆಯೋ, ಎರಡೂ ಕಡೆ ಸಾಯುತ್ತಿರುವವರು ನನ್ನ ಮಕ್ಕಳೇ.**
- ಕಾಶ್ಮೀರದ ವೃದ್ಧ ಮಹಿಳೆ

ಭಾರತ ಮತ್ತು ಪಾಕಿಸ್ತಾನದ ಆಳುವ ವರ್ಗ ಹಾಗೂ ಮತಾಂಧರ ಶತ್ರುತ್ವ ಕಾರ್ಗಿಲ್ ಯುದ್ಧದಲ್ಲಿ ಮುಕ್ತಾಯಗೊಂಡಿದೆ. ಇವರಿಬ್ಬರ ಅಧಿಕಾರ ದಾಹದಿಂದಾಗಿ ಕಾರ್ಗಿಲ್ ರಣರಂಗವಾಗಿದೆ. ಕನಸುಗಳನ್ನು ಕಾಣುವ ಬದುಕನ್ನು ಯುದ್ಧ ಕಸಿದುಕೊಂಡಿದೆ. ದೇಶವೇ ನಿಮ್ಮ ಹಿಂದೆಯಿದೆ ಎಂದು ಹೇಳಿದರೂ ಹಣಕಾಸು ಹರಿದಾಡಿದರೂ ಕಳೆದುಕೊಂಡವರ ಬದುಕಿನ ಮೇಲಾಗಿರುವ ಕಾರ್ಮೋಡ ಕರಗುವ ಸ್ಥಿತಿಯಲ್ಲಂತೂ ಇಲ್ಲ.

ಕಾಶ್ಮೀರದ ಜ್ವಲಂತ ಸಮಸ್ಯೆಯು ದೇಶದ ವಿಭಜನೆಯ ಚರಿತ್ರೆಯೊಂದಿಗೆ ತಳುಕುಹಾಕಿಕೊಂಡಿದೆ. ಇಂದಿನವರೆಗೂ ಕಾಶ್ಮೀರ, ಆಳುವ ವರ್ಗದ ಅಧಿಕಾರ ಲಾಲಸೆಗೆ ಒಂದು ದಾಳ ಮಾತ್ರವಾಗಿದೆ. ಎರಡೂ ದೇಶಗಳಲ್ಲಿ ಈ ಸಮಸ್ಯೆಗೆ ರಾಜಕೀಯವಾಗಿ ಪರಿಹಾರ ಕಂಡುಕೊಳ್ಳಲು ಇದ್ದ ನಿರಾಸಕ್ತಿಯೇ ಪಾಕಿಸ್ತಾನದ ಅತಿಕ್ರಮಣಕ್ಕೆ ನಾಂದಿ ಹಾಡಿದೆ, ಕಾರ್ಗಿಲ್ ಯುದ್ಧಕ್ಕೆ ದಾರಿಮಾಡಿ ಕೊಟ್ಟಿದೆ. ಆದಾಗ್ಯೂ ಗಡಿಯ ಆಚೆ ಈಚೆಯ ಎರಡೂ ದೇಶದ ಜನರೂ ಯುದ್ಧ ನೀತಿಯನ್ನು ವಿರೋಧಿಸುತ್ತಿದ್ದಾರೆ. ಶತ್ರುತ್ವ ಕೊನೆಗಾಣಿಸಲು, ದ್ವೇಷನೀತಿಯ ರಾಜಕೀಯ ಕೊನೆಗಾಣಿಸಲು, ಶಾಂತಿಗಾಗಿ ಬದ್ಧರಾಗಿರುವ ಹಲವಾರು ಜನರು ಧ್ವನಿಯೆತ್ತಿದ್ದಾರೆ. ಶಾಂತಿಗಾಗಿ ಬದ್ಧರಾಗಿದ್ದಾಗ ಮಾತ್ರ ಸಮಸ್ಯೆಗಳನ್ನು ಎದುರಿಸುವುದು ಹಾಗೂ ಬಗೆಹರಿಸುವುದು ಸುಲಭವಾಗುತ್ತದೆ. ಕಾಶ್ಮೀರದ ಸಮಸ್ಯೆಯನ್ನು ಬಗೆಹರಿಸುವಲ್ಲಿ ಕಾಶ್ಮೀರೀ ಜನರ ಭಾವನೆಗೆ, ಧ್ವನಿಗೆ ಬೆಲೆ ಕೊಡುವುದು, ಹಾಗೂ ನಿರ್ಧಾರಗಳ ಹಂತದಲ್ಲಿ ಅವರನ್ನು ಒಳಗೊಳ್ಳುವುದು ಸಮಸ್ಯೆಗೆ ನ್ಯಾಯಬದ್ಧ ಪರಿಹಾರವಾಗಬಲ್ಲದು.

ಗಡಿ ಪ್ರದೇಶಗಳು ಮನುಷ್ಯ ಹುಟ್ಟುಹಾಕಿರುವ ಒಂದು ಕೃತಕ ವಿಚಾರದ ಧಾರೆ ಮಾತ್ರ. ದೇಶವಾಗುವುದು ಜನತೆಯಿಂದಲೇ ಹೊರತು ಗಡಿಗಳಿಂದಲ್ಲ. ಈ ಗಡಿಗಳ ರಕ್ಷಣೆಗಾಗಿ ಶಸ್ತ್ರಾಸ್ತ್ರಗಳು ಜೊತೆಗೆ ಸೈನಿಕ ಪಡೆ. ಈ ಯುದ್ಧೋನ್ಮಾದಕ್ಕಾಗಿ ಜಗತ್ತಿನ ಅರ್ಧದಷ್ಟು ರಾಷ್ಟ್ರಗಳು ಜನತೆಯ ಆರೋಗ್ಯಕ್ಕೆ ಖರ್ಚು ಮಾಡುವುದಕ್ಕಿಂತ ಹೆಚ್ಚು ಗಡಿ ಕಾಯುವಿಕೆಗಾಗಿ ವ್ಯಯಿಸುತ್ತಿದ್ದಾರೆ. ಒಂದು ನಿಮಿಷಕ್ಕೆ ಇಡೀ ಜಗತ್ತಿನಲ್ಲಿ ರಕ್ಷಣೆಗಾಗಿ ವ್ಯಯವಾಗುತ್ತಿರುವ ಹಣ 600 ಲಕ್ಷ. ಕಾರ್ಗಿಲ್‌ನಲ್ಲಿ ಯುದ್ಧಕ್ಕಾಗಿ ಒಂದು ದಿನಕ್ಕೆ ಪೋಲು ಮಾಡುತ್ತಿದ್ದಿದ್ದು 6 ಕೋಟಿ. ಹಸಿವು, ಬಡತನ, ನಿರುದ್ಯೋಗದಿಂದ ಕೆಂಗೆಟ್ಟ ಜನರತ್ತ ಲಕ್ಷ, ಕೋಟಿಗಳು ಹರಿಯುವುದೇ ಇಲ್ಲ!

ಹಿರೋಶಿಮಾ-ನಾಗಸಾಕಿ ಮೇಲಾದ ಅಣುದಾಳಿಯ ದುರಂತವನ್ನು ನಾವಿನ್ನೂ ಮರೆತಿಲ್ಲ. ಶತ್ರು ಹಿಮ್ಮೆಟ್ಟಿಸುವ ತಂತ್ರವಾಗಿ ಅಣುಬಾಂಬ್‌ನ್ನು ತಯಾರಿಸಿದ ಭಾರತ ಪಾಕಿಸ್ತಾನಗಳೆರಡು ತದ್ವಿರುದ್ಧವಾಗಿ ಕಾರ್ಗಿಲ್ ಯುದ್ಧದಲ್ಲಿ ಕೊನೆಗೊಂಡಿದೆ. ಈ ಯುದ್ಧ ಅನಿವಾರ್ಯವಾಗಿತ್ತೆ?

ಅವರು ಗುಂಡೇಟಿಗೆ ಸತ್ತು ಅಮರರಾದರು! ನಾವು ಸಾಯುತ್ತೇವೆ, ಬದುಕಿದ್ದೂ ಸಾಯುತ್ತೇವೆ. ಸತ್ತವರ ನೆನಪಿನಲ್ಲಿ ನಿರುದ್ಯೋಗ, ಹಸಿವೂ, ಬಡತನದ ಬವಣೆಯಲ್ಲಿ.

ಯುದ್ಧ ನಮಗೆ ಬೇಕೆ? ಅನ್ನ ನೀಡಿ, ಉದ್ಯೋಗ ನೀಡಿ, ಬದುಕಲು ಬಿಡಿ, ಯುದ್ಧ ನಿಲ್ಲಿಸಿಬಿಡಿ. ಬನ್ನಿ ನಮ್ಮ ದೇಶ ಮತ್ತೊಂದು ಹಿರೋಶಿಮಾ ಆಗುವುದನ್ನು ತಡೆಯೋಣ.

***ದಿನಾಂಕ 6-8-99ರಂದು ಶಾಂತಿಗಾಗಿ ನಾಗರೀಕ ವೇದಿಕೆ ಹಮ್ಮಿಕೊಂಡ ಪ್ರತಿಭಟನಾ ಕಾರ್ಯಕ್ರಮದಂದು ಪ್ರಕಟಿಸಿದ ಕರಪತ್ರ***

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ**

ಸಂ. ಮಂಡಳಿ

REGD No. KRNA 324

BOOK-POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067